...pliments to Mr. B. Alasingrachar Chief Officer Shimoga

586

॥ ಶ್ರೀಃ ॥

ಶ್ರೀಮದ್ವೇದಾನ್ತದೇಶಿಕ ವಿರಚಿತವಾದ

# ದಶಾವತಾರ ಸ್ತೋತ್ರ

ಮತ್ತು

# ವೈರಾಗ್ಯ ಪಂಚಕ

---

ರಿಮಲ್ಲಪ್ಪನವರ ಹೈಸ್ಕೂಲಿನಲ್ಲಿ ಸಂಸ್ಕೃತಪಂಡಿತರಾದ
ವಿದ್ವಾನ್ ಎ. ವೆಙ್ಕಟಾಚಾರ್ಯರಿಂದ
ರ್ಣಾಟಕ ಟೀಕಾ ತಾತ್ಪರ್ಯದೊಡನೆ ಪ್ರಕಟಿಸಲ್ಪಟ್ಟಿದೆ.

ಮೈಸೂರು
ಜಿ.ಟಿ.ಎ. ಪ್ರೆಸ್ಸಿನಲ್ಲಿ ಮುದ್ರಿತವಾದುದು.
1941

ಬೆಲೆ: 4 ಆಣೆ

# ಪೀಠಿಕೆ

ಈ ದಶಾವತಾರ ಸ್ತೋತ್ರವನ್ನು ಶ್ರೀಮದ್ವೇದಾಂತ ದೇಶಿಕರು ರಚಿಸಿದರು. ಶ್ರೀರಂಗದಲ್ಲಿ ದಶಾವತಾರ ಸನ್ನಿಧಿಯಲ್ಲಿ ಅರ್ಚಾ ಮೂರ್ತಿಗಳನ್ನು ಸೇವಿಸಿ ಮಂಗಳಾಶಾಸನ ಮಾಡುವ ಸಮಯದಲ್ಲಿ ಮೂರ್ತಿಗಳ ವಿಷಯವಾಗಿ ಒಂದು ಸ್ತೋತ್ರವನ್ನು ರಚಿಸಬೇಕೆಂದು ಅಲ್ಲಿರುವ ಭಕ್ತರು ಪ್ರಾರ್ಥಿಸಲು ಅದನ್ನೇ ಭಗವಂತನ ಆಜ್ಞೆ ಯನ್ನಾಗಿ ಭಾವಿಸಿ ಆಗಲೇ ಹದಿಮೂರು ಶ್ಲೋಕಗಳಿಂದ ಕೂಡಿದ ಈ ದಶಾವತಾರ ಸ್ತೋತ್ರವನ್ನು ರಚಿಸಿ ಲೋಕೋಪಕಾರಮಾಡಿದರು.

ಶ್ರೀಮದ್ವೇದಾಂತ ದೇಶಿಕರು, ಶ್ರೀವೈಷ್ಣವ ಮತದ • ಪ್ರಸಿದ್ಧ ವೇದಾಂತಿಗಳು ಮತ್ತು ಕವಿವರೇಣ್ಯರು ಇವರ ತಂದೆ ಅನಂತಸೂರಿ. ತಾಯಿಯು ತೋತಾರಂಬಾ. ತಿರುಪತಿವೆಂಕಟರಮಣಸ್ವಾಮಿಯ ಅನು ಗ್ರಹದಿಂದ ಕಲಿಯುಗ 4370ನೇ ಶುಕ್ಲ ನಾಮಸಂವತ್ಸರದ ಭಾದ್ರಪದ ಮಾಸದ ಶ್ರವಣ ನಕ್ಷತ್ರದಲ್ಲಿ (ಕ್ರಿ.ಶ. 1269) ಕಂಚಿಯಲ್ಲಿ ತೂಪ್ಪಲ್ ಎಂಬ ಸ್ಥಳದಲ್ಲಿ ಆಚಾರ್ಯರು ಅವತರಿಸಿ ತಮ್ಮ ಇಪ್ಪತ್ತು ವರ್ಷ ವಯಸ್ಸಿ ನಲ್ಲಿಯೇ ಸಮಸ್ತ ಶಾಸ್ತ್ರಗಳನ್ನು ಕಲಿತು ಒಳ್ಳೆಯ ಪ್ರತಿಭಾಶಾಲಿ ಗಳಾದರು. ಇವರ ಜ್ಞಾನವೂ, ಪಾಂಡಿತ್ಯವೂ ಅಗಾಧವಾದುದು. ಯಾವ ಶೈಲಿಯಲ್ಲಾದರೂ ಅನಾಯಾಸವಾಗಿಯೂ ಶೀಘ್ರವಾಗಿಯೂ ಕವನ ಮಾಡುವ ಅದ್ಭುತ ಪ್ರತಿಭಾಶಾಲಿಗಳು. ಇವರು ಪಾಂಡಿತ್ಯದಿಂದ ರಾಜಾಶ್ರಯವನ್ನು ಹೊಂದಿ ಬೇಕಾದಷ್ಟು ದ್ರವ್ಯವನ್ನು ಸಂಪಾದಿಸ ಬಹುದಾದರೂ ಕೇವಲ ವೈರಾಗ್ಯದಿಂದ ಯಾರನ್ನೂ ಆಶ್ರಯಿಸಲು ಸಮ್ಮತಿಸಲಿಲ್ಲ. ಇವರು ರಚಿಸಿರುವ ಗ್ರಂಥಗಳು ನಿಷ್ಪಕ್ಷಪಾತಿಗಳಾದ ವಿದ್ವಾಂಸರನ್ನು ಆನಂದಸಾಗರದಲ್ಲಿ ಮಗ್ನರನ್ನಾಗಿಮಾಡುವುವು. ಈ ಮಹನೀಯರು ಭೂಲೋಕದಲ್ಲಿ ನೂರು ವರ್ಷಗಳಕಾಲ ಮಂಡಿಸಿದ್ದು ನೂರಾರು ಗ್ರಂಥಗಳನ್ನು ರಚಿಸಿ, ಲೋಕೋಪಕಾರಮಾಡಿರುತ್ತಾರೆ.

---

ಶ್ರೀಃ

ಶ್ರೀಮತೇ ನಿಗಮಾನ್ತಮಹಾದೇಶಿಕಾಯ ನಮಃ

—o—

**ಶ್ರೀಮಾನ್ವೇಙ್ಕಟನಾಥಾರ್ಯಃ ಕವಿತಾರ್ಕಿಕಕೇಸರೀ।**
**ವೇದಾನ್ತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ॥**

ಅರ್ಥ.—ಶ್ರೀಮಾನ್ = ಜ್ಞಾನಸಂಪತ್ತುಳ್ಳವರಾಗಿಯೂ, ಕವಿತಾರ್ಕಿಕಕೇಸರೀ= ಕವಿಗಳಲ್ಲಿಯೂ ಹೇತುವಾದ ಮಾಡುವ ತಾರ್ಕಿಕರಲ್ಲಿಯೂ ಶ್ರೇಷ್ಠರಾಗಿಯೂ, ವೇದಾಂತಾಚಾರ್ಯವರ್ಯಃ=ವೇದಾಂತ ವಿದ್ಯೆಯನ್ನುಪದೇಶಮಾಡುವ ಆಚಾರ್ಯರೆಲ್ಲರಿಗೂ ಶ್ರೇಷ್ಠರಾಗಿಯೂ ಇರುವ, ವೇಙ್ಕಟನಾಥಾರ್ಯಃ=ವೇಂಕಟನಾಥರೆಂಬ ದಿವ್ಯನಾಮಧೇಯವುಳ್ಳ ಶ್ರೀಮದ್ವೇದಾಂತದೇಶಿಕರು, ಮೇ=ನನ್ನ, ಹೃದಿ=ಮನಸ್ಸಿನಲ್ಲಿ, ಸನ್ನಿಧತ್ತಾಂ=ಸಾನ್ನಿಧ್ಯದಿಂದಿರಲಿ.

ಈ ಶ್ಲೋಕವನ್ನು ವೇದಾಂತದೇಶಿಕರ ವಿಷಯವಾಗಿ ಇವರ ಸುಪುತ್ರರಾದ ಕುಮಾರವರದಾಚಾರ್ಯರು ರಚಿಸಿದರು. ಈ ಶ್ಲೋಕಕ್ಕೆ ''ತನಿಯನ್'' ಎಂದು ಹೆಸರು. ಆಚಾರ್ಯರು ರಚಿಸಿರುವ ಗ್ರಂಥಗಳನ್ನು ಪಠನಮಾಡುವುದಕ್ಕಿಂತ ಮೊದಲು ಆಚಾರ್ಯರನ್ನು ಸ್ತೋತ್ರ ಮಾಡುವುದು ಶ್ರೀವೈಷ್ಣವರಲ್ಲಿ ಸಂಪ್ರದಾಯವಿರುತ್ತದೆ.

ತಾತ್ಪರ್ಯ.- ಶ್ರೇಷ್ಠವಾದ ಜ್ಞಾನಸಂಪತ್ತುಳ್ಳವರಾಗಿಯೂ, ಕವಿಗಳಲ್ಲಿಯೂ ತಾರ್ಕಿಕರಲ್ಲಿಯೂ ಸರ್ವಶ್ರೇಷ್ಠರಾಗಿಯೂ, ವೇದಾಂತಗಳನ್ನು ಉಪದೇಶಮಾಡುವ ಆಚಾರ್ಯರೆಲ್ಲರಿಗೂ ಶ್ರೇಷ್ಠರೂ ಆದ ವೇಂಕಟನಾಥರೆಂಬ ಹೆಸರುಳ್ಳ ಶ್ರೀಮದ್ವೇದಾನ್ತದೇಶಿಕರು ನನ್ನ ಮನಸ್ಸಿನಲ್ಲಿ ಯಾವಾಗಲೂ ಸಾನ್ನಿಧ್ಯದಿಂದಿರಲಿ.

॥ ಶ್ರೀರಸ್ತು ॥

॥ ಶ್ರೀ ಹಯಗ್ರೀವಾಯ ನಮಃ ॥

॥ ಶ್ರೀಮತೇ ರಾಮಾನುಜಾಯ ನಮಃ ॥

# ದಶಾವತಾರ ಸ್ತೋತ್ರಮ್

---

**ದೇವೋ ನಶ್ಶುಭಮಾತನೋತು ದಶಧಾ ನಿರ್ವರ್ತ್ತ-**
**ಯನ್ಭೂಮಿಕಾಂ**
**ರಂಗೇ ಧಾಮನಿ ಲಬ್ಧನಿರ್ಭರರಸೈರಧ್ಯಕ್ಷಿತೋ ಭಾವುಕೈಃ ।**
**ಯದ್ಭಾವೇಷು ಪೃಥಗ್ವಿಧೇಷ್ವನುಗುಣಾನ್ಭಾವಾನ್ಸ್ವಯಂ**
**ಬಿಭ್ರತೀ**
**ಯದ್ಧರ್ಮೈರಿಹ ಧರ್ಮಿಣೀ ವಿಹರತೇ ನಾನಾಕೃತಿ-**
**ರ್ನಾಯಿಕಾ ॥೧॥**

ಅರ್ಥ.— (ಜಗತ್ಪತಿಯಾದ ಶ್ರೀರಂಗನಾಥ ಪರಮಾತ್ಮನು) ದೇವಃ =ಲೀಲೆಯಲ್ಲಿ ಆಸಕ್ತನಾಗಿ (ಅತ ಏವ = ಆದುದರಿಂದಲೇ), ಭೂಮಿಕಾಂ = ಅವತಾರವನ್ನು, ದಶಧಾ = ಹತ್ತು ಪ್ರಕಾರಗಳಾಗಿ, ನಿರ್ವರ್ತಯನ್ = ಸ್ವೀಕರಿಸಿದವನಾಗಿ, ರಙ್ಗೇ = ಶ್ರೀರಂಗವೆಂಬ, ಧಾಮನಿ = ದಿವ್ಯಕ್ಷೇತ್ರದಲ್ಲಿ (ರಂಗಸ್ಥಲದಲ್ಲಿ), ಲಬ್ಧನಿರ್ಭರರಸೈಃ = ಹೊಂದಲ್ಪಟ್ಟ ಸಂಪೂರ್ಣವಾದ ಭಕ್ತಿರಸವುಳ್ಳ (ಶೃಂಗಾರಾದಿ ರಸಗಳುಳ್ಳ), ಭಾವುಕೈಃ = ಭಕ್ತರಿಂದ (ರಸಿಕ ಪುರುಷರಿಂದ), ಅಧ್ಯಕ್ಷಿತಃ = ಸೇವಿಸಲ್ಪಟ್ಟವನಾಗಿ (ನೋಡಲ್ಪಟ್ಟವನಾಗಿ), ನಃ = ನಮಗೆ, ಶುಭಂ = ಮಂಗಳವನ್ನು, ಆತನೋತು = ಉಂಟುಮಾಡಲಿ.

ನಾಯಿಕಾ = ಯಾವ ಶ್ರೀ ರಂಗನಾಯಕೀ ದೇವಿಯು ಪೃಥಗ್ವಿಧೇಷು = ಬೇರೆ ಬೇರೆ ಪ್ರಕಾರಗಳಾದ, ಯದ್ಭಾವೇಷು = ಯಾವ

ಭಗವಂತನ ಅವತಾರಗಳಲ್ಲಿ, ಅನುಗುಣಾನ್ = ಆಯಾ ಅವತಾರಕ್ಕೆ ಸಮಾನಗಳಾದ, ಭಾವಾನ್ = ಅವತಾರಗಳನ್ನು, ಸ್ವಯಂ = ತನ್ನ ಸಂಕಲ್ಪದಿಂದಲೇ, ಬಿಭ್ರತೀ = ಸ್ವೀಕರಿಸಿದವಳಾಗಿ, ಯದ್ಧರ್ಮೈಃ = ಯಾವ ಭಗವಂತನ ಶರಣಾಗತ ರಕ್ಷಣ ರೂಪವಾದ ಧರ್ಮಗಳೊಡನೆ, ಧರ್ಮಿಣೀ=ತಾನೂ ಶರಣಾಗತರಕ್ಷಣ ಧರ್ಮನಿಷ್ಠಳಾಗಿ, ನಾನಾಕೃತಿಃ = (ಸೀತಾ, ರುಕ್ಮಿಣೀ ರೂಪವಾದ) ಅನೇಕ ವಿಧಗಳಾದ ಅವತಾರಗಳುಳ್ಳವಳಾಗಿ, ಇಹ = ಈ ಭೂಮಂಡಲದಲ್ಲಿ, ವಿಹರತೇ = (ಪತಿಯೊಡನೆ) ವಿಹರಿಸುತ್ತಾಳೆಯೋ, (ಸಾಚ = ಆ ಶ್ರೀರಂಗನಾಯಕೀ ದೇವಿಯೂ) ನಃ = ನಮಗೂ, ನಿಮಗೂ, ಶುಭಂ = ಮಂಗಳವನ್ನು, ಆತನೋತು= ಉಂಟುಮಾಡಲಿ.

ತಾತ್ಪರ್ಯ.—ಯಾವ ಪರಮಾತ್ಮನು ಲೀಲೆಯಲ್ಲಿ ಆಸಕ್ತನಾಗಿ ಹತ್ತು ವಿಧಗಳಾದ ರೂಪಗಳನ್ನು ಎತ್ತಿಕೊಂಡು ಶ್ರೀರಂಗವೆಂಬ ದಿವ್ಯ ಕ್ಷೇತ್ರದಲ್ಲಿ ಭಕ್ತರಿಂದ ಸೇವಿಸಲ್ಪಡುತ್ತಾನೆಯೋ, ಯಾವ ಶ್ರೀ ರಂಗನಾಯಕೀ ದೇವಿಯು ಭಗವಂತನ ಬೇರೆ ಬೇರೆ ವಿಧಗಳಾದ ಅವತಾರಗಳಲ್ಲಿಯೂ "ರಾಘವತ್ವೇಽಭವತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ ಅನ್ಯೇಷು ಚಾವತಾರೇಷು ವಿಷ್ಣೋರೇಷಾನಪಾಯಿನೀ" ಎಂಬಂತೆ ಆಯಾ ಅವತಾರಕ್ಕೆ ಉಚಿತವಾದ ರೂಪವನ್ನು ಸ್ವೀಕರಿಸಿ ಭಗವಂತನ ಶರಣಾಗತರಕ್ಷಣ ರೂಪವಾದ ಧರ್ಮವನ್ನು ತಾನೂ ಆಚರಿಸುತ್ತಾ ಅನೇಕ ಪ್ರಕಾರವಾಗಿ ಈ ಭೂಮಿಯಲ್ಲಿ ಪತಿಯೊಡನೆ ಲೀಲಾ ರಸವನ್ನು ಅನುಭವಿಸುತ್ತಾಳೆಯೋ, ಆ ದಿವ್ಯ ದಂಪತಿಗಳಿಬ್ಬರೂ ನಮಗೆ ಕ್ಷೇಮವನ್ನು ವಿಶೇಷವಾಗಿ ಉಂಟುಮಾಡಲಿ.

ಟಿಪ್ಪಣಿ.—ಈ ಶ್ಲೋಕದಲ್ಲಿ ಪದಪ್ರಯೋಗದಿಂದಲೂ ಕಥಾ ಸಂದರ್ಭದಿಂದಲೂ ನಾಟಕ ಪ್ರಕ್ರಿಯೆಯು ತೋರುತ್ತದೆ. "ದೇವಃ"

ಎಂಬುವುದರಿಂದ ಲೀಲೆಯೂ, "ದಶಧಾ" ಎಂಬುವುದರಿಂದ ನಾಟಕ ಪ್ರಭೇದಗಳೂ, "ಭೂಮಿಕಾಂ" ಎಂಬುವುದರಿಂದ ವೇಷಧಾರಣವೂ, "ನಿರ್ಭರರಸೈಃ, ಭಾವುಕೈಃ" ಎಂಬುವುದರಿಂದ ನಾಟಕರಸಿಕಪುರುಷರೂ, "ನಾಯಿಕಾ" ಎಂಬುವುದರಿಂದ ನಟಿಯೂ, "ರಂಗೇ" ಎಂಬುವುದರಿಂದ ನರ್ತನ ಸ್ಥಲವೂ ಸೂಚಿಸಲ್ಪಡುತ್ತದೆ.

ರಂಗಸ್ಥಲದಲ್ಲಿ ಹತ್ತುವಿಧ ರೂಪಕಗಳಿಗೆ ಅನುಗುಣವಾಗಿ ವೇಷವನ್ನು ಧರಿಸುವ ನಟನು ತನಗೆ ಅನುಗುಣವಾದ ವೇಷವುಳ್ಳ ನಟಿಯೊಡನೆ ನಟಿಸುತ್ತಾ ಪ್ರೇಕ್ಷಕರಿಗೆ ಹೇಗೆ ಆನಂದವನ್ನುಂಟುಮಾಡುತ್ತಾನೆಯೋ ಹಾಗೆಯೇ ಜನಗಳನ್ನು ಉದ್ಧಾರಮಾಡಬೇಕೆಂಬ ಪರಮ ಕರುಣೆಯಿಂದ ಆಯಾ ಅವತಾರಕ್ಕೆ ಉಚಿತವೇಷವುಳ್ಳ ಲಕ್ಷ್ಮೀದೇವಿಯೊಡನೆ ಸರ್ವಕಾಲದಲ್ಲಿಯೂ ಲೋಕಾನುಗ್ರಹಾರ್ಥವಾಗಿ ಭಗವಂತನು ಶ್ರೀರಂಗ ಕ್ಷೇತ್ರದಲ್ಲಿ ದಶಾವತಾರ ಸನ್ನಿಧಿಯಲ್ಲಿ, ಅರ್ಚಾರೂಪದಿಂದ ಸೇವಿಸುವ ಜನರನ್ನು ಅನುಗ್ರಹಿಸುತ್ತಾ ಐಹಿಕ ಆಮುಷ್ಮಿಕ ಫಲಪ್ರದನಾಗಿರುತ್ತಾನೆಂದು ಭಾವನೆ

**ನಿರ್ಮಗ್ನಶ್ರುತಿಜಾಲಮಾರ್ಗಣದಶಾದತ್ತಕ್ಷಣೈರ್ವೀಕ್ಷಣೈ**
**ರನ್ತಸ್ತನ್ವದಿವಾರವಿನ್ದಗಹನಾನ್ಯೌದನ್ವತೀನಾಮಪಾಮ್ ।**
**ನಿಷ್ಪ್ರತ್ಯೂಹತರಙ್ಗರಿಙ್ಖಣಮಿಥಃ ಪ್ರತ್ಯೂಢಪಾಥಶ್ಛಟಾ-**
**ಡೋಲಾರೋಹಸದೋಹಲಂ ಭಗವತೋ ಮಾತ್ಸ್ಯಂ ವಪುಃ**
**ಪಾತು ನಃ ॥೨॥**

ಮತ್ಸ್ಯಾವತಾರ ವರ್ಣನೆ.

ಅ.—ನಿರ್ಮಗ್ನ = (ಪ್ರಳಯಕಾಲದಲ್ಲಿ ಅಸುರರಿಂದ ಅಪಹರಿಸಲ್ಪಟ್ಟು ನೀರಿನಲ್ಲಿ) ಮುಳುಗಿದ, ಶ್ರುತಿಜಾಲ = (ರೂಪಗಳನ್ನು ಹೊಂದಿದ) ವೇದಗಳ ಸಮೂಹವನ್ನು, ಮಾರ್ಗಣದಶಾ = ಹುಡು

ಕುವ ಸಮಯದಲ್ಲಿ, ದತ್ತೇಕ್ಷಣೈಃ = (ನಾಲ್ಕು ಕಡೆಗಳಲ್ಲಿಯೂ) ಇಡಲ್ಪಟ್ಟ ಅವಧಾನವುಳ್ಳ (ಎಚ್ಚರಿಕೆಯುಳ್ಳ), ವೀಕ್ಷಣೈಃ= ನೋಟಗಳಿಂದ, ಔದನ್ವತೀನಾಂ = ಪ್ರಲಯ ಸಮುದ್ರ ಸಂಬಂಧಿಗಳಾದ, ಅಪಾಂ = ನೀರುಗಳ, ಅಂತಃ= ಒಳಗಡೆಯಲ್ಲಿ, ಅರವಿಂದಗಹನಾನಿ= ತಾವರೆ ಹೂವುಗಳ ವನಗಳನ್ನು, ತನ್ವದಿವ= ಹರಡುತ್ತಿರುವನೋ ಎಂಬಂತಿರುವ (ಅತಏವ = ಆದುದರಿಂದಲೇ) ನಿಷ್ಪ್ರತ್ಯೂಹ = ತಡೆಯಿಲ್ಲದಿರುವ, ತರಂಗ = ಅಲೆಗಳ, ರಿಂಖಣ = ಹೊಡೆತದಿಂದ (ಚಲನದಿಂದ), ಮಿಥಃ = ಒಂದಕ್ಕೊಂದು, ಪ್ರತ್ಯೂಢ = ಹೊಡೆಯಲ್ಪಟ್ಟ, ಪಾಥಃ = ನೀರುಗಳ, ಛಟಾ = ಸಮೂಹವೆಂಬ, ಡೋಲಾ = ಉಯ್ಯಾಲೆಯನ್ನು (ತೊಟ್ಟಿಲನ್ನು), ಆರೋಹಣ = ಹತ್ತುವುದರಲ್ಲಿ, ಸದೋಹಲಂ = ಅಭಿಲಾಷೆಯಿಂದಕೂಡಿದ ಮಾತ್ಸ್ಯಂ= ಮತ್ಸ್ಯಸಂಬಂಧವುಳ್ಳ, ಭಗವತಃ = ಶ್ರೀ ರಂಗನಾಥದೇವರ, ವಪುಃ = ದಿವ್ಯ ಮಂಗಳವಿಗ್ರಹವು, ನಃ = ನಮ್ಮನ್ನು, ಪಾತು = ರಕ್ಷಿಸಲಿ.

ತಾ.—ಮಧು ಕೈಟಭರೆಂಬ ರಾಕ್ಷಸರಿಂದ ಅಪಹರಿಸಲ್ಪಟ್ಟು ಸಮುದ್ರದ ನೀರಿನಲ್ಲಿ ಮುಳುಗಿದ ನಾಲ್ಕು ವೇದಗಳನ್ನು ಹುಡುಕುವ ಸಮಯದಲ್ಲಿ, ನೀರಿನ ಎಲ್ಲಾ ಕಡೆಯಲ್ಲಿಯೂ ನೋಡುವುದರಿಂದ ಸಮುದ್ರದೊಳಗೆ ಅನೇಕ ತಾವರೆಪುಷ್ಪಗಳ ವನಗಳನ್ನು ಸೃಷ್ಟಿಸುವನೋ ಎಂಬಂತಿರುವ, ಎಡಬಿಡದೆ ಪರಸ್ಪರ ಹೊಡೆದುಕೊಂಡಿರುವ ಅಲೆಗಳೆಂಬ ಉಯ್ಯಾಲೆಯನ್ನು ಹತ್ತಬೇಕೆಂಬ ಕುತೂಹಲವುಳ್ಳ, ಭಗವಂತನ ಮತ್ಸ್ಯಸಂಬಂಧವಾದ ದಿವ್ಯ ಮಂಗಳವಿಗ್ರಹವು ನಮ್ಮನ್ನು ರಕ್ಷಿಸಲಿ.

ಟಿ.—ಭಗವಂತನ ನೇತ್ರಗಳು ಕಮಲದಂತಿರುವುದರಿಂದ ನೋಡಿದ ಕಡೆಯೆಲ್ಲಾ ಪ್ರತಿಬಿಂಬಿಸಿ ತಾವರೆಯವನಗಳಂತೆ ಕಾಣುವುದು ಸಹಜವೇ ಸರಿ.

**ಅವ್ಯಾಸುರ್ಭುವನತ್ರಯೀಮನಿಭೃತಂ ಕಂಡೂಯನೈರದ್ರಿಣಾ**
**ನಿದ್ರಾಣಸ್ಯ ಪರಸ್ಯ ಕೂರ್ಮವಪುಷೋ ನಿಶ್ವಾಸವಾತೋ-**
**ರ್ಮಯಃ ।**
**ಯದ್ವಿಕ್ಷೇಪಣಸಂಸ್ಕೃತೋದಧಿಪಯಃ ಪ್ರೇಙ್ಖೋಳ**
**ಪರ್ಯಙ್ಕಿಕಾ**
**ನಿತ್ಯಾರೋಹಣನಿರ್ವೃತೋ ವಿಹರತೇ ದೇವಸ್ಸಹೈವ**
**ಶ್ರಿಯಾ॥೩**

### ಕೂರ್ಮಾವತಾರ ವರ್ಣನೆ

ಅ.—ಅದ್ರಿಣಾ = (ಕಡೆಯುವುದಕ್ಕೆ ಯೋಗ್ಯವಾದ) ಮಂದರನೆಂಬ ಪರ್ವತದಿಂದ, ಅನಿಭೃತಂ = ನಿಶ್ಚಲವಾಗಿರೋಣ ಹೇಗೋ ಹಾಗೆ, ಕಂಡೂಯನೈಃ = (ಘರ್ಷಣಗಳಿಂದ) ಕೆನೆಯುವಿಕೆಗಳಿಂದ, ನಿದ್ರಾಣಸ್ಯ = ಯೋಗನಿದ್ರೆಯಲ್ಲಿರುವ, ಕೂರ್ಮವಪುಷಃ = ಆಮೆಯ ಶರೀರದಂತೆ ಶರೀರವುಳ್ಳ, ಪರಸ್ಯ = ಪರಮಪುರುಷನ, ನಿಶ್ವಾಸವಾತೋರ್ಮಯಃ = ನಿಟ್ಟುಸಿರೆಂಬ ಗಾಳಿಯಿಂದುಂಟಾದ ಅಲೆಗಳು, ಭುವನತ್ರಯೀಂ = ಮೂರು ಲೋಕಗಳನ್ನು, ಅವ್ಯಾಸುಃ = ರಕ್ಷಿಸಲಿ. ಯದ್ವಿಕ್ಷೇಪಣ = ಯಾವ ಅಲೆಗಳ ಹೊಡೆತದಿಂದ, ಸಂಸ್ಕೃತ = ಕದಲಿಸಲ್ಪಟ್ಟ, ಉದಧಿ = ಕ್ಷೀರಸಮುದ್ರದ, ಪಯಃ = ಹಾಲೆಂಬ, ಪ್ರೇಂಖೋಳಪರ್ಯಂಕಿಕಾ = ಚಲಿಸುವ ಹಾಸಿಗೆಯನ್ನು, ನಿತ್ಯಾರೋಹಣ = ಸ್ಥಿರವಾಗಿ ಹತ್ತುವಿಕೆಯಿಂದ, ನಿರ್ವೃತಃ = ಸುಖವುಳ್ಳವನಾಗಿ, ದೇವ ಏವ = ಕ್ಷೀರಸಾಗರಶಾಯಿಯಾದ ಭಗವಂತನೇ, ಶ್ರಿಯಾ ಸಹ = ಲಕ್ಷ್ಮೀದೇವಿಯೊಡನೆ, ವಿಹರತೇ = ಕ್ರೀಡಿಸುತ್ತಾನೆ.

ತಾ.—ಕ್ಷೀರ ಸಮುದ್ರವನ್ನು ಮಥನಮಾಡುವ ಸಮಯದಲ್ಲಿ ಮಂದರ ಪರ್ವತದ ಘರ್ಷಣದಿಂದ, ಆಮೆಯ ರೂಪವನ್ನು ತಾಳಿ ಪರ್ವ

ತವನ್ನು ಮುಳುಗದಂತೆ ನಿಲ್ಲಿಸಿದ ಪರಮಾತ್ಮನ ನಿಟ್ಟುಸಿರುಗಾಳಿಯಿಂದುಂಟಾದ ನೀರಿನ ಅಲೆಗಳು ಮೂರು ಲೋಕಗಳನ್ನೂ ರಕ್ಷಿಸಲಿ ಮತ್ತು ಆ ಕ್ಷೀರಸಮುದ್ರದ ಅಲೆಗಳೆಂಬ ಚಲಿಸುವ ಹಾಸಿಗೆಯಲ್ಲಿ ಲಕ್ಷ್ಮೀ ಸಹಿತನಾದ ಪರಮಾತ್ಮನು ಸ್ಥಿರವಾಗಿ ವಿಹರಿಸುತ್ತಿರುವನು.

**ಗೋಪಾಯೇದನಿಶಂ ಜಗನ್ತಿ ಕುಹನಾಪೋತ್ರೀಪವಿತ್ರೀಕೃತ-**
**ಬ್ರಹ್ಮಾಣ್ಡಃಪ್ರಳಯೋರ್ಮಿಘೋಷಗುರುಭಿರ್ಘೋಣಾರವೈ-**
**ರ್ಘುರ್ಘುರೈಃ ।**
**ಯದ್ದಂಷ್ಟ್ರಾಙ್ಕುರಕೋಟಿಗಾಢಘಟನಾನಿಷ್ಕಂಪನಿತ್ಯಸ್ಥಿತಿ**
**ರ್ಬ್ರಹ್ಮಸ್ತಂಬಮಸೌದಸೌ ಭಗವತೀ ಮುಸ್ತೇವ ವಿಶ್ವಂ-**
**ಭರಾ॥೪॥**

ವರಾಹಾವತಾರ ವರ್ಣನೆ

ಅ.—ಭಗವತೀ = ಪೂಜ್ಯವಾದ, ಅಸೌ = ಈ, ವಿಶ್ವಂಭರಾ = ಭೂಮಿಯು, ಯದ್ದಂಷ್ಟ್ರಾಂಕುರ = ಯಾವ ವರಾಹಮೂರ್ತಿಯ ಹರಿತವಾದ ಕೋರೆ ಹಲ್ಲುಗಳ, ಕೋಟಿ = ತುದಿಯಲ್ಲಿ, ಗಾಢ = ದೃಢವಾಗಿ, ಘಟನಾ = ಸೇರುವಿಕೆಯಿಂದ, ನಿಷ್ಕಂಪ = ಚಲಿಸದಿರುವಿಕೆಯಿಂದ, ನಿತ್ಯಸ್ಥಿತಿಃ = ಸ್ಥಿರವಾದ ಸ್ಥಿತಿಯುಳ್ಳದ್ದಾಗಿ, ಮುಸ್ತೇವ = ಕೋರನಾರಿಗಡ್ಡೆಯಂತೆ, ಬ್ರಹ್ಮಸ್ತಂಬಂ = ಜಗತ್ತನ್ನು, ಅಸೌತ್ = ಹಡೆಯಿತೋ, ಸಃ = ಆ, ಕುಹನಾಪೋತ್ರೀ = ಕಪಟ ವರಾಹಮೂರ್ತಿಯು, ಪ್ರಲಯೋರ್ಮಿಘೋಷಗುರುಭಿಃ=ಪ್ರಲಯಕಾಲದಲ್ಲಿ ಎಲ್ಲವನ್ನೂ ಮುಳುಗಿಸುವ ಸಮುದ್ರದ ಅಲೆಗಳ ಶಬ್ದಕ್ಕಿಂತಲೂ ಹೆಚ್ಚಾದ, ಘುರ್ಘುರೈಃ =ಘುರುಘುರು ಎಂಬ ಶಬ್ದವನ್ನು ಅನುಕರಿಸುವ, ಘೋಣಾರವೈಃ = ಮೂಗಿನ ಧ್ವನಿಗಳಿಂದ, ಪವಿತ್ರೀಕೃತ = ಪರಿಶುದ್ಧವಾಗಿ ಮಾಡಲ್ಪಟ್ಟ,

ಬ್ರಹ್ಮಾಂಡಃ = ಬ್ರಹ್ಮಾಂಡವುಳ್ಳದ್ದಾಗಿ, ಜಗಂತಿ = ಲೋಕಗಳನ್ನು, ಅನಿಶಂ = ಯಾವಾಗಲೂ, ಗೋಪಾಯೇತ್ = ಕಾಪಾಡಲಿ.

ತಾ.—ಯಾವ ಆದಿವರಾಹಮೂರ್ತಿಯ ಚೂಪಾದ ಕೋರೆಹಲ್ಲುಗಳ ತುದಿಗಳಿಂದ ದೃಢವಾಗಿ ಹಿಡಿಯಲ್ಪಟ್ಟು ನಿಶ್ಚಲವಾದ ಸ್ಥಿತಿಯುಳ್ಳದ್ದಾಗಿ ಮುಸ್ತಾ ಎಂಬ ಒಂದು ಗಡ್ಡೆಯಂತಿರುವ ಈ ಪವಿತ್ರವಾದ ಭೂಮಿಯು, ಬ್ರಹ್ಮಾಂಡವೆಂಬ ಒಂದು ಕಡ್ಡಿಯನ್ನು ಉಂಟುಮಾಡಿತೋ ಅಂತಹ ಆದಿವರಾಹಮೂರ್ತಿಯು, ಪ್ರಲಯ ಸಮುದ್ರದ ಅಲೆಗಳಿಗಿಂತಲೂ ಹೆಚ್ಚಾದ "ಘುರ್‌ಘುರ್" ಎಂಬ ಶಬ್ದಗಳಿಂದ ಬ್ರಹ್ಮಾಂಡವನ್ನು ಪವಿತ್ರವನ್ನಾಗಿ ಮಾಡಿ ಲೋಕಗಳನ್ನು ಯಾವಾಗಲೂ ಕಾಪಾಡಲಿ.

**ಪ್ರತ್ಯಾದಿಷ್ಟಪುರಾತನಪ್ರಹರಣಗ್ರಾಮಃ ಕ್ಷಣಂ ಪಾಣಿಜೈ**
**ರವ್ಯಾತ್ತ್ರೀಣಿ ಜಗನ್ತ್ಯಕುಣ್ಠಮಹಿಮಾ ವೈಕುಣ್ಠಕಣ್ಠೀರವಃ।**
**ಯತ್ಪ್ರಾದುರ್ಭವನಾದವನ್ಧ್ಯಜಠರಾ ಯಾದೃಚ್ಛಿಕಾ-**
**ದ್ವೇಧಸಾಂ**
**ಯಾಕಾಚಿತ್ಸಹಸಾ ಮಹಾಸುರಗೃಹಸ್ಥೂಣಾ ಪಿತಾಮಹ್ಯ-**
**ಭೂತ್॥೫॥**

ನೃಸಿಂಹಾವತಾರ ವರ್ಣನೆ

ಅ.—ಯಾದೃಚ್ಛಿಕಾತ್ = (ಪ್ರಯತ್ನವಿಲ್ಲದೆ) ಹಠಾತ್ತಾಗಿ, ಸಹಸಾ = ತ್ವರೆಯಿಂದುಂಟಾದ, ಯತ್ಪ್ರಾದುರ್ಭವನಾತ್ = ಯಾವ ನೃಸಿಂಹಮೂರ್ತಿಯ ಅವತಾರದಿಂದ, ಯಾಕಾಚಿತ್ = ಯಾವುದೋ ಒಂದು, ಮಹಾಸುರಗೃಹಸ್ಥೂಣಾ = (ಹಿರಣ್ಯಕಶಿಪುವೆಂಬ) ಮಹಾಸುರನ ಅರಮನೆಯ ಸ್ತಂಭವು, ಅವನ್ಧ್ಯಜಠರಾಸತೀ = ಬಂಜೆತನ

ವಿಲ್ಲದ ಹೊಟ್ಟೆಯುಳ್ಳದ್ದಾಗಿ, ವೇಧಸಾಂ = ಚತುರ್ಮುಖ ಬ್ರಹ್ಮರುಗಳಿಗೆ, ಪಿತಾಮಹೀ = ತಂದೆಯನ್ನು ಹಡೆದವಳಾಗಿ (ಅಜ್ಜಿಯಾಗಿ) ಅಭೂತ್ = ಆಯಿತೋ, ಅಕುಂಠಮಹಿಮಾ = ತಡೆಯಿಲ್ಲದ ಸಾಮರ್ಥ್ಯವುಳ್ಳದ್ದೂ, ಪಾಣಿಜೈಃ = ನಖಗಳಿಂದ, ಕ್ಷಣಂ = ಕ್ಷಣಕಾಲವು, ಪ್ರತ್ಯಾದಿಷ್ಟ = ತಿರಸ್ಕರಿಸಲ್ಪಟ್ಟ, ಪುರಾತನ = ಬಹಳದಿನಗಳಿಂದಿರುವ, ಪ್ರಹರಣ = ಚಕ್ರವೇ ಮೊದಲಾದ ಆಯುಧಗಳ, ಗ್ರಾಮಃ = ಸಮೂಹವುಳ್ಳದ್ದೂ ಆದ, ಸಃ = ಆ ಪ್ರಸಿದ್ಧನಾದ, ವೈಕುಂಠಕಂಠೀರವಃ = ಸಿಂಹರೂಪಿಯಾದ ಪರಮಾತ್ಮನು, ತ್ರೀಣಿ = ಮೂರು, ಜಗಂತಿ = ಲೋಕಗಳನ್ನು, ಅವ್ಯಾತ್ = ರಕ್ಷಿಸಬೇಕು.

ತಾ.—ಸ್ವಲ್ಪವೂ ಪ್ರಯತ್ನವಿಲ್ಲದೆ ತಾತ್ಕಾಲಿಕವಾಗಿ ಕಾಣಿಸಿಕೊಂಡ ನೃಸಿಂಹಾವತಾರದಿಂದ ಹಿರಣ್ಯಕಶಿಪುವೆಂಬ ಮಹಾಸುರನ ಅರಮನೆಯ ಒಂದಾನೊಂದು ಸ್ತಂಭವು ಯಾವ ನೃಸಿಂಹರೂಪನಾದ ಮಗನನ್ನು ಪಡೆದದ್ದರಿಂದ ಸಾರ್ಥಕವಾದ ಉದರವುಳ್ಳದ್ದಾಗಿ ಚತುರ್ಮುಖ ಬ್ರಹ್ಮರಿಗೆಲ್ಲಾ ತಂದೆಯನ್ನು ಪಡೆದ ಅಜ್ಜಿಯಾಯಿತೋ, ಮತ್ತು ಒಂದು ಕ್ಷಣಕಾಲದಲ್ಲಿ ಹಿರಣ್ಯಕಶಿಪುವಿನ ಎದೆಯನ್ನು ಸೀಳಿದ್ದರಿಂದ ಚಕ್ರವೇ ಮೊದಲಾದ ಆಯುಧಗಳಿಗಿಂತಲೂ ಹೆಚ್ಚು ಮಹಿಮೆಯುಳ್ಳ ಶ್ರೀ ನೃಸಿಂಹಮೂರ್ತಿಯ ದಿವ್ಯನಖಗಳು ಮೂರು ಲೋಕಗಳನ್ನೂ ರಕ್ಷಿಸಲಿ.

**ವ್ರೀಡಾವಿದ್ಧವದಾನ್ಯದಾನವ ಯಶೋನಾಸೀರಧಾಟೀಭಟ**
**ಸ್ತ್ರೈಯ್ಯಕ್ಷಂಮುಕುಟಂ ಪುನನ್ನವತುನಸ್ತ್ರೈವಿಕ್ರಮೋ**
**ವಿಕ್ರಮಃ ।**
**ಯತ್ರ ಪ್ರಸ್ತಾವಸಮುಚ್ಛ್ರಿತ ಧ್ವಜಪಟೀವೃತ್ತಾನ್ತ ಸಿದ್ಧಾನ್ತಿಭಿ-**
**ಸ್ಸ್ರೋತೋಭಿಸ್ಸುರಸಿಂಧುರಷ್ಟಸುದಿಶಾ ಸೌಧೇಷು**
**ದೋಧೂಯತೇ॥೬॥**

## ವಾಮನಾವತಾರ (ತ್ರಿವಿಕ್ರಮಾವತಾರ) ವರ್ಣನೆ

ಅ.—ವ್ರೀಡಾ = (ದಾನಶೂರನಾದ ತನ್ನನ್ನು ಸ್ವಲ್ಪವನ್ನೇ ಯಾಚಿಸಿದನೆಂಬ) ಲಜ್ಜೆಯಿಂದ, ವಿದ್ಧ = ಹೊಡೆಯಲ್ಪಟ್ಟ(ವ್ಯಾಕುಲವುಳ್ಳ), ವದಾನ್ಯ = ದಾನಶೂರನಾದ, ದಾನವ = (ಬಲಿಯೆಂಬ) ಅಸುರನ, ಯಶಃ = ಕೀರ್ತಿಯು, ನಾಸೀರ = ಅಗ್ರಭಾಗದಲ್ಲಿ (ಕೀರ್ತಿಗಿಂತಲೂ ಮುಂಚೆಯೇ), ಧಾಟೀ = ಬಹಳ ವೇಗವುಳ್ಳ, ಭಟಃ = ಸೇವಕನಾದ, ತ್ರೈಯ್ಯಕ್ಷಂ = ರುದ್ರನ ಸಂಬಂಧವಾದ, ಮುಕುಟಂ= ಕಿರೀಟವನ್ನು (ಶಿರಸ್ಸನ್ನು), ಪುನನ್ = ಪರಿಶುದ್ಧಿ ಮಾಡುವ, ತ್ರೈವಿಕ್ರಮಂ = ಮೂರು ಲೋಕಗಳನ್ನು ಅಳೆದ ಪರಮಾತ್ಮನ ಸಂಬಂಧವಾದ, ವಿಕ್ರಮಃ = ಪಾದವು, ನಃ = ನಮ್ಮನ್ನು, ಅವತು = ರಕ್ಷಿಸಲಿ.

ಯತ್ರಸಾ್ತವ = ಯಾವ ತ್ರಿವಿಕ್ರಮಾವತಾರಿಯು ಹೆಜ್ಜೆಯನ್ನಿಡುವ ಸಮಯದಲ್ಲಿ, ಸಮುಚ್ಛ್ರಿತ = ಮೇಲಕ್ಕೆತ್ತಿ ಕಟ್ಟಲ್ಪಟ್ಟ, ಧ್ವಜಪಟೀ = ಧ್ವಜವಸ್ತ್ರದ, ವೃತ್ತಾಂತ = ಚರಿತ್ರೆಗೆ, ಸಿದ್ಧಾಂತಿಭಿಃ = ಸದೃಶಗಳಾದ, ಸ್ರೋತೋಭಿಃ = ಪ್ರವಾಹಗಳಿಂದ, ಸುರಸಿಂಧುಃ = ದೇವಗಂಗೆಯು, ಅಷ್ಟಸು = ಎಂಟುವಿಧಗಳಾದ, ದಿಶಾಸೌಧೇಷು = ದಿಕ್ಕುಗಳೆಂಬ ಮಹಡಿಗಳಮೇಲೆ, ದೋಧೂಯತೇ = ಅತಿಶಯವಾಗಿ ಯಾವಾಗಲೂ ಚಲಿಸುತ್ತಿದೆಯೋ (ಅಂತಹ ತ್ರಿವಿಕ್ರಮ ಭಗವಂತನ ಪಾದವು ನಮ್ಮನ್ನು ರಕ್ಷಿಸಲಿ).

ತಾ.—ದಾನಶೂರನಾದ ತನ್ನನ್ನು ಸ್ವಲ್ಪವೇ ಯಾಚಿಸಿದನೆಂಬ ಲಜ್ಜೆಯಿಂದಕೂಡಿದ ಬಲಿಚಕ್ರವರ್ತಿಯ ಕೀರ್ತಿಗಿಂತಲೂ ಮುಂಚೆಯೇ ವೇಗವಾಗಿ ಓಡುವ ಸೇವಕನಂತಿರುವುದೂ, ರುದ್ರನ ಶಿರಸ್ಸನ್ನು ಪವಿತ್ರಮಾಡಿದ್ದೂ, ಪರಾಕ್ರಮವನ್ನು ತೋರಿಸುವುದಕ್ಕಾಗಿ ಮೇಲ

ಕ್ಕೈತಿ_ಕಟ್ಟಿದ ಧ್ವಜವಸ್ತ್ರದಂತಿರುವುದೂ ಆದ ದೇವಗಂಗೆಯು ಪ್ರವಾಹವನ್ನು ಎಂಟು ದಿಕ್ಕುಗಳೆಂಬ ಮುಹಡಿಗಳಮೇಲೆ ಯಾವಾಗಲೂ ಚಲಿಸುವಂತೆ ಮಾಡುವ ತ್ರಿವಿಕ್ರಮನ ಸಂಬಂಧವಾದ ಪಾದವು ನಮ್ಮನ್ನು ಯಾವಾಗಲೂ ರಕ್ಷಿಸಲಿ.

ಟಿ.—ಇಲ್ಲಿ ವಾಮನಾವತಾರವನ್ನು ವರ್ಣಿಸುವುದು ಪ್ರಸಕ್ತವಾದರೂ ಅದರ ಅವಸ್ಥಾಂತರವಾದ (ಬೇರೆ ಪ್ರಕಾರವಾದ) ತ್ರಿವಿಕ್ರಮಾವತಾರದ ವರ್ಣನೆಯೂ ಉಪಪನ್ನವಾಗುವುದು.

**ಕ್ರೋಧಾಗ್ನಿಂ ಜಮದಗ್ನಿಪೀಡನಭವಂ ಸನ್ತರ್ಪಯಿಷ್ಯನ್ ಕ್ರಮಾ**
**ದಕ್ಷತ್ರಾಮಿಹಸನ್ತತಕ್ಷ ಯ ಇಮಾಂ ತ್ರಿಸ್ಸಪ್ತಕೃತ್ವಃಕ್ಷಿತಿಂ ।**
**ದತ್ವಾಕರ್ಮಣಿ ದಕ್ಷಿಣಾಂ ಕ್ವಚನ ತಾಮಾಸ್ಕಂದ್ಯ ಸಿನ್ಧುಂವಸ**
**ನ್ನಬ್ರಹ್ಮಣ್ಯಮಪಾಕರೋತು ಭಗವಾನಾಬ್ರಹ್ಮಕೀಟಂ ಮುನಿಃ ॥ ೭ ॥**

ಪರಶುರಾಮಾವತಾರ ವರ್ಣನೆ

ಅ.—ಯಃ = ಯಾವ ಪರಶುರಾಮನು, ಜಮದಗ್ನಿಪೀಡನಭವಂ = ತಂದೆಯಾದ ಜಮದಗ್ನಿಯನ್ನು ಕೊಂದುದರಿಂದುಂಟಾದ, ಕ್ರೋಧಾಗ್ನಿಂ = ಕೋಪವೆಂಬ ಅಗ್ನಿಯನ್ನು, ಸಂತರ್ಪಯಿಷ್ಯನ್ = ತೃಪ್ತಿಪಡಿಸುವವನಾಗಿ, ಇಮಾಂ = ಈ, ಕ್ಷಿತಿಂ = ಭೂಮಿಯನ್ನು, ಅಕ್ಷತ್ರಾಮಪಿ=ಕ್ಷತ್ರಿಯರ ಹುಟ್ಟೇ ಇಲ್ಲದಂತೆ, ಕ್ರಮಾತ್ = ಕ್ರಮವಾಗಿ, ತ್ರಿಸ್ಸಪ್ತಕೃತ್ವಃ = ಇಪ್ಪತ್ತೊಂದು ಸಲ, ಅಭಿಸಂತತಕ್ಷ = ಚನ್ನಾಗಿ ನಾಶಮಾಡಿದನೋ, ಭಗವಾನ್ = ಷಡ್ಗುಣಸಂಪನ್ನನಾದ, ಸಃ ಮುನಿಃ = ಆ ಪರಶುರಾಮನು, ತಾಂ = (ರಾಜರೇ ಇಲ್ಲದಿರುವಿಕೆಯಿಂದ ತನ್ನ ವಶವಾದ ಸಮಗ್ರವಾದ) ಆ ಭೂಮಿಯನ್ನು, ಕ್ವಚನ =

ಒಂದಾನೊಂದು, ಕರ್ಮಣಿ = (ತನ್ನಿಂದ ಆಚರಿಸಲ್ಪಟ್ಟ ಸರ್ವಸ್ವ ದಕ್ಷಿಣೆಯುಳ್ಳ) ಯಾಗ ಕರ್ಮದಲ್ಲಿ, ದಕ್ಷಿಣಾಂ = ದಕ್ಷಿಣೆಯನ್ನಾಗಿ, ದತ್ವಾ = ಕೊಟ್ಟು, ಸಿಂಧುಂ = ಸಮುದ್ರವನ್ನು, ಆಸ್ಕಂದ್ಯ = ಸ್ವಾಧೀನಪಡಿಸಿಕೊಂಡು, ವಸನ್ = ವಾಸಮಾಡುತ್ತಿರುವವನಾಗಿ, ಆಬ್ರಹ್ಮಕೀಟಂ = ಚತುರ್ಮುಖ ಬ್ರಹ್ಮನು ಮೊದಲು ಕೀಟಪರ್ಯಂತವಾಗಿ, ಅಬ್ರಹ್ಮಣ್ಯಂ = ಅಮಂಗಳವನ್ನು, ಅಪಾಕರೋತು = ಹೋಗಲಾಡಿಸಲಿ.

ತಾ.—ಯಾವ ಪರಶುರಾಮನು ತನ್ನ ತಂದೆಯು ಹೊಂದಿದ ಹಿಂಸೆಯಿಂದುಂಟಾದ ಕೋಪಾಗ್ನಿಯನ್ನು ಹೋಗಲಾಡಿಸುವುದಕ್ಕಾಗಿ ಈ ಭೂಮಿಯಲ್ಲಿ ಕ್ಷತ್ರಿಯರ ಹುಟ್ಟೇ ಇಲ್ಲದಂತೆ ಇಪ್ಪತ್ತೊಂದು ಸಲ ಕ್ಷತ್ರಿಯರನ್ನು ಸಂಹರಿಸಿ ಆ ಭೂಮಿಯನ್ನು ಎಲ್ಲವನ್ನೂ ಒಬ್ಬ ಬ್ರಾಹ್ಮಣನಿಗೆ ದಕ್ಷಿಣೆಯಾಗಿಕೊಟ್ಟು ಸಮುದ್ರವನ್ನು ವಶಪಡಿಸಿಕೊಂಡು ಅಲ್ಲಿ ವಾಸವಾಗಿದ್ದನೋ ಅಂತಹ ಪರಶುರಾಮನು, ಬ್ರಹ್ಮನು ಮೊದಲುಗೊಂಡು ಹುಳುಪರ್ಯಂತವಾಗಿರುವ ಎಲ್ಲಾ ಪ್ರಾಣಿಗಳಿಗೂ ಅಮಂಗಳವನ್ನು ಹೋಗಲಾಡಿಸಲಿ.

ಟಿ.—ಪರಶುರಾಮನ ತಂದೆಯಾದ ಜಮದಗ್ನಿಯನ್ನು ಕ್ಷತ್ರಿಯನಾದ ಕಾರ್ತವೀರ್ಯಾರ್ಜುನನು ವಧಿಸಿದನು. ಆದರಿಂದಲೇ ಕ್ಷತ್ರಿಯರ ಬುಡವನ್ನೇ ಇಡಬಾರದೆಂದು ಪರಶುರಾಮನು ಇಪ್ಪತ್ತೊಂದು ಸಲ ರಾಜರನ್ನು ವಧಿಸಿ ಆ ರಕ್ತದಲ್ಲಿ ಪಿತೃತರ್ಪಣಮಾಡಿದನು.

**ಪಾಪಾವಾರಪಯೋವಿಶೋಷಣಕಲಾಪಾರೀಣಕಾಲಾನಲ**
**ಜ್ವಾಲಾಜಾಲವಿಹಾರಹಾರಿವಿಶಿಖವ್ಯಾಪಾರಘೋರಕ್ರಮಃ ।**
**ಸರ್ವಾವಸ್ಥಸಕೃತ್ಪ್ರಪನ್ನಜನತಾ ಸಂರಕ್ಷಣೈಕವ್ರತೀ**
**ಧರ್ಮೋ ವಿಗ್ರಹವಾನಧರ್ಮವಿರತಿಂ ಧನ್ವೀ ಸ ತನ್ವೀತ ನಃ**
**॥ ೮ ॥**

## ಶ್ರೀ ರಾಮಾವತಾರ ವರ್ಣನೆ

ಅ.—ಪಾರಾವಾರ = ಸಮುದ್ರದ, ಪಯಃ = ನೀರಿನ (ನೀರನ್ನು), ವಿಶೋಷಣ = ಒಣಗಿಸುವ, ಕಲಾ = ವಿದ್ಯೆಯಲ್ಲಿ, ಪಾರೀಣ = ಸಮರ್ಥನಾದುದರಿಂದಲೇ, ಕಾಲಾನಲ = ಪ್ರಲಯಕಾಲಾಗ್ನಿಯ, ಜ್ವಾಲಾ = ಶಿಖೆಗಳ, ಜಾಲ = ಸಮೂಹದ, ವಿಹಾರ = ವಿಲಾಸವನ್ನು, ಹಾರಿ = ಕದಿಯುವ, ವಿಶಿಖ = ಬಾಣಗಳ, ವ್ಯಾಪಾರಘೋರಕ್ರಮಃ = ಕಾರ್ಯಾಚರಣೆಯ ಕ್ರೂರವಾದ ಕ್ರಮವುಳ್ಳವನೂ, ಸರ್ವಾವಸ್ಥ = ಎಲ್ಲಾ ಸ್ಥಿತಿಗಳಲ್ಲಿಯೂ, ಸಕೃತ್ = ಒಮ್ಮೆ, ಪ್ರಪನ್ನ = ಶರಣಹೊಂದುವ, ಜನತಾ = ಜನಸಮೂಹವನ್ನು, ರಕ್ಷಣ = ಕಾಪಾಡುವುದರಲ್ಲಿ, ಏಕವ್ರತೀ = ಮುಖ್ಯ ವ್ರತವುಳ್ಳವನೂ, ವಿಗ್ರಹವಾನ್ = ರೂಪವನ್ನು ಹೊಂದಿದ, ಧರ್ಮ ಇವ = ಧರ್ಮದೇವತೆಯಂತೆಯೂ ಇರುವ, ಸಃ = (ಪರಮಕಾರುಣ್ಯದಿಂದಲೂ ಶೌರ್ಯದಿಂದಲೂ) ಪ್ರಸಿದ್ಧನಾದ, ಧನ್ವೀ = ಕೋದಂಡಪಾಣಿಯಾದ ಶ್ರೀರಾಮಚಂದ್ರಮೂರ್ತಿಯು, ನಃ = ನಮಗೆ, ಅಧರ್ಮವಿರತಿಂ = ಪಾಪವಿನಾಶವನ್ನು, ತನ್ವೀತ = ಮಾಡಲಿ.

ತಾ.—ಸಮುದ್ರದ ನೀರನ್ನು ಒಣಗಿಸುವುದರಲ್ಲಿ ಸಾಮರ್ಥ್ಯವುಳ್ಳ ಪ್ರಲಯಕಾಲದ ಅಗ್ನಿಯ ಜ್ವಾಲೆಗಳಿಗಿಂತಲೂ ಉಗ್ರವಾದ ಅಸ್ತ್ರಸಾಮರ್ಥ್ಯವುಳ್ಳ, ಯಾವಸ್ಥಿತಿಯಲ್ಲಿದ್ದರೂ ಒಂದುಸಲ ಶರಣಹೊಂದುವ ಪ್ರಾಣಿಸಾಮಾನ್ಯವನ್ನೂ ಕಾಪಾಡುವುದರಲ್ಲಿ ಬದ್ಧಕಂಕಣನಾದ "ರಾಮೋ ವಿಗ್ರಹವಾನ್ ಧರ್ಮಃ" ಎಂಬಂತೆ ಸಾಕ್ಷಾತ್ ಧರ್ಮದೇವತೆಯೇ ರೂಪವನ್ನು ತಾಳಿ ಬಂದಿರುವಂತೆ ಧರ್ಮಸ್ವರೂಪನೂ ಕೋದಂಡಪಾಣಿಯೂ ಆದ ಶ್ರೀರಾಮಚಂದ್ರಮೂರ್ತಿಯು ನಮ್ಮ ದುರಿತಗಳನ್ನು ದೂರಮಾಡಲಿ.

**ಘಕ್ಕೃತ್ಕೌರವಪಟ್ಟಣಪ್ರಭೃತಯಃ ಪ್ರಾಸ್ತಪ್ರಲಂಬಾದಯ**
**ಸ್ತಾಲಾಙ್ಕಸ್ಯ ತಥಾ ವಿಧಾ ವಿಹೃತಯಸ್ತನ್ವನ್ತು ಭದ್ರಾಣಿ ನಃ।**
**ಕ್ಷೀರಂ ಶರ್ಕರಯೇವ ಯಾಭಿರಪೃಥಗ್ಭೂತಾಃ ಪ್ರಭೂತೈರ್ಗುಣೈ**
**ರಾಕೌಮಾರಕಮಸ್ವದನ್ತ ಜಗತೇ ಕೃಷ್ಣಸ್ಯ ತಾಃ ಕೇಳಯಃ**
**॥೯॥**

ಬಲರಾಮಾವತಾರ ವರ್ಣನೆ

ಅ.—ಘಕ್ಕೃತ್ = (ಗಂಗೆಯಲ್ಲಿ ಬೀಳುವಿಕೆಯಿಂದುಂಟಾದ ಭೀತಿಯಿಂದ) ಹಾಹಾ ಎಂದು ಶಬ್ದಮಾಡುವ, ಕೌರವ = ಕುರುವಂಶದ ದೊರೆಯಾದ ದುರ್ಯೋಧನನ, ಪಟ್ಟಣಪ್ರಭೃತಯಃ = ಹಸ್ತಿನಾವತೀ ಪಟ್ಟಣವೇ ಮೊದಲಾಗುಳ್ಳವುಗಳೂ, ಪ್ರಾಸ್ತಪ್ರಲಂಬಾದಯಃ = ಸಂಹರಿಸಲ್ಪಟ್ಟ ಪ್ರಲಂಬನೆಂಬ ಅಸುರನೇ ಆದಿಯಾಗಿ ಉಳ್ಳವುಗಳೂ, ತಥಾ ವಿಧಾಃ = ಅದೇ ಪ್ರಕಾರಗಳಾದ (ಜರಾಸಂಧಪರಾಜಯ ಯಮುನಾಕರ್ಷಣವೇ ಮೊದಲಾದ), ತಾಲಾಙ್ಕಸ್ಯ = ತಾಳೆಮರವನ್ನೇ ಧ್ವಜವಾಗಿಯುಳ್ಳ ಬಲರಾಮನ, ವಿಹೃತಯಃ = ಲೀಲೆಗಳು, ನಃ = ನಮಗೆ, ಭದ್ರಾಣಿ = ಶುಭಗಳನ್ನು, ತನ್ವನ್ತು = ಮಾಡಲಿ. ಕ್ಷೀರಂ = ಹಾಲು, ಶರ್ಕರಯೇವ = ಶರ್ಕರೆಯೊಡನೆ ಸೇರಿರುವಂತೆ, ಯಾಭಿಃ = ಯಾವ ಬಲರಾಮನ ಕ್ರೀಡೆಗಳೊಡನೆ, ಅಪೃಥಗ್ಭೂತಾಃ = ಬೇರೆಯಾಗದಿರುವ, ಕೃಷ್ಣಸ್ಯ = ಶ್ರೀ ಕೃಷ್ಣಪರಮಾತ್ಮನ, ಆ ಕೌಮಾರಕಂ = ಬಾಲ್ಯಮೊದಲುಗೊಂಡುಂಟಾದ, ತಾಃ = ಆ ಜಗತ್ಪ್ರಸಿದ್ಧಗಳಾದ, ಕೇಳಯಃ = ಲೀಲೆಗಳು, ಪ್ರಭೂತೈಃ = ಅಪರಿಮಿತಗಳಾದ, ಗುಣೈಃ = ಪರತ್ವ ಸೌಲಭ್ಯಸೌಶೀಲ್ಯಾದಿ ದಿವ್ಯಕಲ್ಯಾಣಗುಣಗಳಿಂದ, ಜಗತೇ = ಪ್ರಪಂಚಕ್ಕೋಸ್ಕರ, ಅಸ್ವದನ್ತ = ಅಹ್ಲಾದಕರಗಳಾದವೋ (ಅಂತಹ ಬಲರಾಮನ ವಿಹಾರಗಳು ಲೋಕಕ್ಕೆ ಕ್ಷೇಮವನ್ನು ಮಾಡಲಿ).

ತಾ.—ದುರ್ಯೋಧನನ ಹಸ್ತಿನಾವತೀ ಪಟ್ಟಣವು ಗಂಗೆಯಲ್ಲಿ ಬೀಳುವುದೂ, ಪ್ರಲಂಬನೇ ಮೊದಲಾದ ಅಸುರರನ್ನು ಸಂಹರಿಸುವುದೂ ಇವೇ ಮೊದಲಾದ, ಇನ್ನೂ ಅನೇಕ ವಿಧಗಳಾದ ಲೀಲೆಗಳು, ಹಾಲು ಸಕ್ಕರೆಯೊಡನೆ ಮಿಶ್ರವಾಗಿ ಮಿಂಗಡಿಸುವುದಕ್ಕಾಗದಂತಿರುವ ಜಗತ್ಪ್ರಸಿದ್ಧಗಳಾದ ಶ್ರೀ ಕೃಷ್ಣನ ಮತ್ತು ಬಲರಾಮನ ಬಾಲ್ಯ ಲೀಲೆಗಳು, ಲೋಕಕ್ಕೆ ಮಂಗಳಕರಗಳಾದವೋ ಅಂತಹ ಬಲರಾಮನ ಲೀಲೆಗಳು ನಮಗೆ ಮಂಗಳವನ್ನುಂಟುಮಾಡಲಿ.

**ನಾಥಾಯೈವ ನಮಃ ಪದಂ ಭವತು ನಶ್ಚಿತ್ರೈಶ್ಚರಿತ್ರಕ್ರಮೈ**
**ರ್ಭೂಯೋಭಿರ್ಭುವನಾನ್ಯಮ್ರಾನಿ ಕುಹನಾಗೋಪಾಯ ಗೋ**
**ಪಾಯತೇ ।**
**ಕಾಳಿಂದೀರಸಿಕಾಯ ಕಾಳಿಯಫಣಿಸ್ಫಾರಸ್ಫಟಾವಾಟಿಕಾ**
**ರಙ್ಗೋತ್ಸಂಗವಿಶಙ್ಕಚಂಕ್ರಮಧುರಾ ಪರ್ಯಾಯ ಚರ್ಯಾ**
**ಯತೇ ॥ ೧೦ ॥**

### ಶ್ರೀ ಕೃಷ್ಣಾವತಾರ ವರ್ಣನೆ

ಅ.—ಭೂಯೋಭಿಃ = ಅನೇಕಗಳಾಗಿಯೂ, ಚಿತ್ರೈಃ = ಆಶ್ಚರ್ಯಕರಗಳಾಗಿಯೂ ಇರುವ, ಚರಿತ್ರಕ್ರಮೈಃ = ದಿವ್ಯ ಲೀಲೆಗಳ ಕ್ರಮಗಳಿಂದ, ಇಮಾನಿ = ಈ, ಭುವನಾನಿ = ಲೋಕಗಳನ್ನು, ಗೋಪಾಯತೇ = ಕಾಪಾಡತಕ್ಕವನೂ, ಕಾಳಿಂದೀ ರಸಿಕಾಯ = ಯಮುನಾ ನದಿಯಲ್ಲಿ ಕ್ರೀಡಿಸುವುದರಲ್ಲಿ ಆಶೆಯುಳ್ಳವನೂ, ಕಾಳಿಯ = ಕಾಳಿಯನೆಂಬ ಮಹಾ ಸರ್ಪದ, ಸ್ಫಾರ = ವಿಶಾಲವಾದ, ಸ್ಫಟಾ = ಹೆಡೆಗಳ, ವಾಟಿಕಾ = ವೀದಿಯೆಂಬ, ರಂಗ = ನಾಟ್ಯಸ್ಥಳದ, ಉತ್ಸಂಗ = ಮಧ್ಯಪ್ರದೇಶದಲ್ಲಿ, ವಿಶಂಕ = ನಿರ್ಭಯವಾದ, ಚಂಕ್ರಮಧುರಾಃ = ನರ್ತನವನ್ನು ನಿರ್ವಹಿಸುವುದಕ್ಕೆ, ಪರ್ಯಾಯ = ಸದೃಶಗಳಾದ, ಚರ್ಯಾಃ

= ನಡತೆಗಳನ್ನು (ಲೀಲೆಗಳನ್ನು), ಯತೇ = ಹೊಂದುವವನೂ ಆದ, ಕುಹನಾಗೋಪಾಯ = ಕಪಟ ಗೋಪಾಲಕನಾದ (ಲೀಲಾರ್ಥವಾಗಿ ಸ್ವೀಕರಿಸಲ್ಪಟ್ಟ ಗೊಲ್ಲವೇಷವುಳ್ಳ), ನಃ = ನಮ್ಮಗಳಿಗೆ, ನಾಥಾಯೈವ = ರಕ್ಷಕನಾದ ಶ್ರೀ ಕೃಷ್ಣಪರಮಾತ್ಮನಗೋಸ್ಕರವೇ, ನಮಃ = ನಮಸ್ಕಾರವು, ಭವತು = ಆಗಲಿ.

ತಾ.—ಅನೇಕವಿಧಗಳಾದ ಮತ್ತು ಆಶ್ಚರ್ಯಕರಗಳಾದ ಪೂತನಾ ಸಂಹಾರ, ಶಕಟಾಸುರ ವಧೆ, ಗೋವರ್ಧನೋದ್ಧರಣ, ಕಂಸವಧೆಯೇ ಮೊದಲಾದ ದಿವ್ಯಲೀಲೆಗಳಿಂದ ಲೋಕವನ್ನು ರಕ್ಷಿಸುವುದರಲ್ಲಿ ಆಸಕ್ತಿಯುಳ್ಳವನೂ, ಕಾಳೀಯಸರ್ಪದ ವಿಶಾಲವಾದ ಹೆಡೆಗಳ ಮಧ್ಯಪ್ರದೇಶವೆಂಬ ರಂಗಸ್ಥಳದಲ್ಲಿ ಭಯವಿಲ್ಲದೆ ಅನೇಕವಿಧ ನರ್ತನಮಾಡತಕ್ಕವನೂ, ಲೀಲಾರ್ಥವಾಗಿ ಗೋಪವೇಷವನ್ನು ಧರಿಸಿರುವವನೂ ನಮಗೆಲ್ಲರಿಗೂ ರಕ್ಷಕನೂ ಆದ, ಶ್ರೀ ಕೃಷ್ಣಪರಮಾತ್ಮನಿಗೋಸ್ಕರವಾಗಿಯೇ ನಮ್ಮ ನಮಸ್ಕಾರವೆಂಬ ಶಬ್ದವು ಇರಲಿ.

**ಭಾವಿನ್ಯಾ ದಶಯಾ ಭವನ್ನಿಹ ಭವಧ್ವಂಸಾಯ ನಃ ಕಲ್ಪತಾಂ**
**ಕಲ್ಕೀ ವಿಷ್ಣುಯಶಸ್ಸುತಃ ಕಲಿಕಥಾ ಕಾಲುಷ್ಯಕೂಲಂಕಷಃ।**
**ನಿಶ್ಶೇಷಕ್ಷತಕಂಟಕೇ ಕ್ಷಿತಿತಲೇ ಧಾರಾಜಲೌಘೈರ್ಧ್ರುವಂ**
**ಧರ್ಮಂ ಕಾರ್ತಯುಗಂ ಪ್ರರೋಹಯತಿ ಯನ್ನಿಸ್ತ್ರಿಂಶಧಾರಾ ಧರಃ ॥೧೧॥**

## ಕಲ್ಕ್ಯವತಾರ ವರ್ಣನೆ

ಅ.—ಭಾವಿನ್ಯಾ = ಮುಂದೆ ಸಂಭವಿಸುವ, ದಶಯಾ = ಅವತಾರದೊಡನೆ, ಇಹ = ಈ ಶ್ರೀರಂಗಕ್ಷೇತ್ರದಲ್ಲಿರುವ ದಶಾವತಾರ ಸನ್ನಿಧಿಯಲ್ಲಿ, ಭವನ್ = ಅರ್ಚಾರೂಪಿಯಾಗಿರುವ, ವಿಷ್ಣುಯಶಸ್ಸುತಃ = (ಶಂಬಳಗ್ರಾಮವಾಸಿಯಾದ) ವಿಷ್ಣುಯಶಸ್ಸೆಂಬ ಬ್ರಾಹ್ಮಣನಿಗೆ ಪುತ್ರ

ನಾದ, ಕಲಿಕಥಾಕಾಲುಷ್ಯಕೂಲಂಕಷಃ = ಕಲಿಯುಗದಲ್ಲಿರುವ ಜನಗಳ ಪಾಪವನ್ನು ಹೋಗಲಾಡಿಸುವ, ಕಲ್ಕೀ = ಕಲ್ಕ್ಯವತಾರದ ಭಗವಂತನು, ನಃ = ನಮ್ಮ, ಭವಧ್ವಂಸಾಯ = ಸಂಸಾರನಾಶಕ್ಕೋಸ್ಕರ (ಪುನರ್ಜನ್ಮವಿಲ್ಲದಿರುವುದಕ್ಕೋಸ್ಕರ), ಕಲ್ಪತಾಂ = ಆಗಲಿ. ಯಸ್ನಿಸ್ತ್ರಿಂಶಧಾರಾಧರಃ=ಯಾವ ಕಲ್ಕಿಪರಮಾತ್ಮನ ಖಡ್ಗವೆಂಬ ಮೇಘವು, ಕ್ಷಿತಿತಲೇ = ಭೂಲೋಕವು, ನಿಶ್ಶೇಷಕ್ಷತಕಂಟಕೇಸತಿ = ಸ್ವಲ್ಪವೂ ಉಳಿಯದಂತೆ ನಾಶಮಾಡಲ್ಪಟ್ಟ ದುಷ್ಟರುಳ್ಳದ್ದಾಗುತ್ತಿರಲು, ಧಾರಾಜಲೌಘೈಃ = ಖಡ್ಗದ ಅಗ್ರವೆಂಬ ನೀರಿನ ಪ್ರವಾಹಗಳಿಂದ, ಕಾರ್ತ್ತಯುಗಂ = ಕೃತಯುಗ ಸಂಬಂಧವಾದ, ಧರ್ಮಂ = ಅತ್ಯುತ್ತಮವಾದ ವರ್ಣಾಶ್ರಮ ಧರ್ಮವನ್ನು, ಧ್ರುವಂ=ಸ್ಥಿರವಾಗಿ (ನಿಜವಾಗಿ), ಪ್ರರೋಹಯತಿ = ವೃದ್ಧಿಮಾಡುತ್ತದೆಯೋ (ಆ ಕಲ್ಕಿಪರಮಾತ್ಮನು ನಮ್ಮಗಳ ಪಾಪಗಳನ್ನು ಹೋಗಲಾಡಿಸಲಿ).

ತಾ.—ಈ ಕಲಿಯುಗದಲ್ಲಿ ಇನ್ನುಮುಂದೆ ಉದ್ಭವಿಸುವ ಅವತಾರ ಮೂರ್ತಿಯೊಡನೆ ಈ ಶ್ರೀರಂಗದಲ್ಲಿರುವ ದಶಾವತಾರ ಸನ್ನಿಧಿಯಲ್ಲಿ ಅರ್ಚಾರೂಪಿಯಾಗಿರತಕ್ಕವನೂ, ಶಂಬಳ ಗ್ರಾಮವಾಸಿಯಾದ ವಿಷ್ಣುಯಶಸ್ಸೆಂಬ ಬ್ರಾಹ್ಮಣನಿಗೆ ಮಗನಾಗಿ ಹುಟ್ಟುವವನೂ, ತನ್ನ ಹಿತವಾದ ದಿವ್ಯಖಡ್ಗದಿಂದ ಭೂಮಿಯಲ್ಲಿರುವ ದುಷ್ಟರನ್ನು ನಿಶ್ಶೇಷವಾಗಿ ಸಂಹರಿಸಿ ಕೃತಯುಗದ ಅತ್ಯುತ್ತಮವಾದ ವರ್ಣಾಶ್ರಮವನ್ನು ಸ್ಥಿರವಾಗಿ ನೆಲೆಸುವಂತೆ ಮಾಡತಕ್ಕವನೂ ಆದ ಶ್ರೀಮತ್ ಕಲ್ಕಿಭಗವಂತನು ನಮ್ಮ ಪಾಪಗಳನ್ನು ಹೋಗಲಾಡಿಸಿ ಸಂಸಾರಬಂಧವನ್ನು ತೊಲಗಿಸಲಿ.

ಟಿ.—ಕಲ್ಕ ಅಂದರೆ ಬಿಳಿಯ ಕುದುರೆ; ಕಲ್ಕೀ ಅಂದರೆ ಬಿಳೀ ಕುದುರೆಯುಳ್ಳವನೆಂದು ಅರ್ಥ.

**ಇಚ್ಛಾಮೀನ ವಿಹಾರಕಚ್ಛಪ ಮಹಾಪೋತ್ರಿನ್ ಯದೃಚ್ಛಾ ಹರೇ**
**ರಕ್ಷಾವಾಮನ ರೋಷರಾಮ ಕರುಣಾಕಾಕುತ್ಸ್ಥ ಹೇಲಾಹಲಿನ್ ।**
**ಕ್ರೀಡಾವಲ್ಲವ ಕಲ್ಕಿವಾಹನ ದಶಾ ಕಲ್ಕಿನ್ನಿತಿಪ್ರತ್ಯಹಂ**
**ಜಲ್ಪನ್ತಃ ಪುರುಷಾಃ ಪುನನ್ತು ಭುವನಂ ಪುಣ್ಯೌಘಪಣ್ಯಾಪಣಾಃ ॥ ೧೨ ॥**

ವೇದಾಂತಾಚಾರ್ಯರು ಹೀಗೆ ಬೇರೆ ಬೇರೆಯಾಗಿ ಅವತಾರಗಳನ್ನು ಸ್ತುತಿಸಿ, ತರುವಾಯ ಹತ್ತವತಾರಗಳನ್ನು ಸೇರಿಸಿ ಸ್ತುತಿಸುವಂತೆ ಒಂದು ಶ್ಲೋಕವನ್ನು ರಚಿಸಿ ಸ್ತುತಿಯ ಫಲವನ್ನು ಪ್ರತಿಪಾದಿಸುತ್ತಾರೆ.

ಅ.—ಇಚ್ಛಾಮೀನ = (ಅಸುರರಿಂದ ಅಪಹರಿಸಲ್ಪಟ್ಟು ಸಮುದ್ರ ಮಧ್ಯದಲ್ಲಿಡಲ್ಪಟ್ಟ ವೇದವನ್ನು ಮತ್ತೆ ಬ್ರಹ್ಮನಿಗೆ ತಂದೊಪ್ಪಿಸ ಬೇಕೆಂಬ) ಇಚ್ಛೆಯಿಂದ ಮತ್ಸ್ಯಾವತಾರವನ್ನು ಸ್ವೀಕರಿಸಿದ ಪರಮಾತ್ಮನೇ, ವಿಹಾರಕಚ್ಛಪ = ಲೀಲಾರ್ಥವಾಗಿ ಸ್ವೀಕರಿಸಿದ ಆಮೆಯರೂಪಿಯಾದ ಪರಮಾತ್ಮನೇ, ಮಹಾಪೋತ್ರಿನ್ = ದೊಡ್ಡ ವರಾಹರೂಪಿಯಾದ ಭಗವಂತನೇ, ಯದೃಚ್ಛಾಹರೇ = (ರಾಮ ಕೃಷ್ಣಾದ್ಯವತಾರಗಳಂತೆ ದೇವಾದಿ ಪ್ರಾರ್ಥನೆಯಿಲ್ಲದೆ) ಹಠಾತ್ತಾಗಿ ಸ್ವೇಚ್ಛೆಯಿಂದ ಸ್ವೀಕರಿಸಿದ ನೃಸಿಂಹಮೂರ್ತಿಯೇ, ರಕ್ಷಾವಾಮನ=ದೇವೇಂದ್ರನನ್ನು ರಕ್ಷಿಸುವುದಕ್ಕೋಸ್ಕರ ಕುಳ್ಳರೂಪವುಳ್ಳ ಪರಮಾತ್ಮನೇ, ರೋಷರಾಮ = ತನ್ನ ತಂದೆಯನ್ನು ಕೊಂದದ್ದಕ್ಕಾಗಿ ರಾಜರ ಮೇಲೆ ಕೋಪಗೊಂಡು ಕೊಡಲಿಯನ್ನು ಧರಿಸಿ ಅವತರಿಸಿದ ಪರಶುರಾಮ ಭಗವಂತನೇ, ಕರುಣಾಕಾಕುತ್ಸ್ಥ=ದಯೆಯೇ ರೂಪವನ್ನುಹೊಂದಿ ಬಂದಿರುವುದೋ ಎಂಬಂತೆ ಕಕುತ್ಸ್ಥವಂಶದಲ್ಲಿ ಅವತರಿಸಿದ ಶ್ರೀ ರಘುರಾಮನೇ, ಹೇಲಾಹಲಿನ್=

ಲೀಲಾರ್ಥವಾಗಿ ನೇಗಿಲನ್ನೇ ಆಯುಧವಾಗಿಯುಳ್ಳ ಬಲರಾಮನೇ, ಕ್ರೀಡಾವಲ್ಲವ = ಲೀಲಾರ್ಥವಾಗಿ ಗೋಪವೇಷವನ್ನು ಧರಿಸಿದ ಶ್ರೀಕೃಷ್ಣ ಪರಮಾತ್ಮನೇ, ಕಲ್ಕಿವಾಹನ = ಬಿಳಿಯಕುದುರೆಯನ್ನೇ ವಾಹನವಾಗುಳ್ಳ, ದಶಾ = ಸ್ಥಿತಿಯಲ್ಲಿ, ಕಲ್ಕಿನ್ = ಕಲ್ಕವುಳ್ಳವನು (ಬಿಳಿ ಕುದುರೆಯುಳ್ಳವನು) ಎಂದು ಯಥಾರ್ಥ ಹೆಸರುಳ್ಳ ಪರಮಾತ್ಮನೇ, ಇತಿ = ಹೀಗೆಂದು, ಪ್ರತ್ಯಹಂ = ಪ್ರತಿದಿನದಲ್ಲಿಯೂ (ಪ್ರಾತಃಕಾಲದಲ್ಲಿ), ಜಲ್ಪನ್ತಃ = (ಕೇಳುವವರಿಗೆ ಆನಂದವನ್ನುಂಟುಮಾಡುವಂತೆ) ಅನೇಕಸಾರಿ ಹೇಳುವ, (ಅತ ಏವ = ಆದುದರಿಂದಲೇ) ಪುಣ್ಯೌಘ ಪಣ್ಯಾಪಣಾಃ = ಪುಣ್ಯಸಮೂಹವನ್ನು ಮಾರುವ ಸ್ಥಳವಾದ ಅಂಗಡಿಯಂತಿರುವ, ಪುರುಷಾಃ = ಮನುಷ್ಯರು (ಜಾತಿಭೇದವಿಲ್ಲದಂತೆ). ಭುವನಾನಿ = ಲೋಕಗಳನ್ನು, ಪುನಂತಿ = ಪವಿತ್ರ ಮಾಡುತ್ತಾರೆ.

ತಾ.—ಜಗತ್ತು ಉಜ್ಜೀವಿಸಬೇಕೆಂದು ಸ್ವೇಚ್ಛೆಯಿಂದ ಸ್ವೀಕರಿಸಿದ ಮತ್ಸ್ಯರೂಪಿಯೇ, ಲೀಲಾರ್ಥವಾಗಿ ಸ್ವೀಕರಿಸಿದ ಕೂರ್ಮರೂಪಿಯೇ, ದೊಡ್ಡ ವರಾಹರೂಪಿಯೇ, ಹಠಾತ್ತಾಗಿ ಕಾಣಿಸಿಕೊಂಡ ನರಸಿಂಹನೇ, ಇಂದ್ರನನ್ನು ರಕ್ಷಿಸುವುದಕ್ಕೋಸ್ಕರ ಕುಳ್ಳನಾಗಿ ಅವತರಿಸಿದ ಭಗವಂತನೇ, ತಂದೆಯನ್ನು ಕೊಂದದ್ದಕ್ಕಾಗಿ ಮಹಾ ಕೋಪಗೊಂಡ ಪರಶುರಾಮನೇ, ದಯೆಯೇ ರೂಪವನ್ನುಹೊಂದಿರುವುದೋ ಎಂಬಂತೆ ಅವತರಿಸಿದ ಶ್ರೀರಾಮನೇ, ಲೀಲಾರ್ಥವಾಗಿ ನೇಗಿಲನ್ನು ಧರಿಸಿದ ಬಲರಾಮನೇ, ಲೀಲಾರ್ಥವಾಗಿ ಗೊಲ್ಲವೇಷವನ್ನು ಸ್ವೀಕರಿಸಿದ ಶ್ರೀ ಕೃಷ್ಣ ಪರಮಾತ್ಮನೇ, ಕಲ್ಕಿಯೆಂದು ಸಾರ್ಥಕವಾದ ಹೆಸರುಳ್ಳ ಕಲ್ಕಿಭಗವಂತನೇ—ಎಂಬುದಾಗಿ ಅನೇಕಸಾರಿ ಹೇಳುವಿಕೆಯೆಂಬ ಪುಣ್ಯ ರಾಶಿಯನ್ನು ವಿಕ್ರಯಿಸುವ ಅಂಗಡಿಯಂತಿರುವ ಮನುಷ್ಯರು (ಭಕ್ತರು) ಈ ಲೋಕವನ್ನು ಪವಿತ್ರಮಾಡುತ್ತಾರೆ.

**ವಿದ್ಯೋದನ್ವತಿ ವೇಙ್ಕಟೇಶ್ವರಕವೌ ಜಾತಂ ಜಗನ್ಮಂಗಳಂ**
**ದೇವೇಶಸ್ಯ ದಶಾವತಾರವಿಷಯಂ ಸ್ತೋತ್ರಂ ವಿವಕ್ಷೇತ ಯಃ।**
**ವಕ್ತ್ರೇ ತಸ್ಯ ಸರಸ್ವತೀ ಬಹುಮುಖೀ ಭಕ್ತಿಃ ಪರಾ ಮಾನಸೇ**
**ಶುದ್ಧಿಃ ಕಾಪಿ ತನೌ ದಿಶಾಸು ದಶಸು ಖ್ಯಾತಿ ಶ್ಶುಭಾಜ್ಜೃಮ್ಭತೇ**
**॥ ೧೩ ॥**

ಆಚಾರ್ಯರು ಹೀಗೆ ತನ್ನನ್ನು ನಿಮಿತ್ತಮಾಡಿಕೊಂಡು ಭಗವಂತನಿಂದಲೇ ಹೇಳಲ್ಪಟ್ಟ ಈ ದಶಾವತಾರ ಸ್ತೋತ್ರವನ್ನು ಅನುಸಂಧಾನಮಾಡುವವರಿಗೆ ಉಂಟಾಗುವ ಫಲಪ್ರಾಪ್ತಿಯನ್ನು ಹೇಳುತ್ತಾರೆ.

ಅ.—ವಿದ್ಯೋದನ್ವತಿ = ವಿದ್ಯೆಗೆ ಸಮುದ್ರದಂತಿರುವ, ವೇಂಕಟೇಶ್ವರಕವೌ = ವೇಂಕಟನಾಥರೆಂಬ ಕವಿಯಲ್ಲಿ (ವೇಂಕಟೇಶ್ವರನೆಂಬ ಕವಿಯಾದ ನನ್ನಲ್ಲಿ), ಜಾತಂ = ಉಂಟಾದ, ಜಗನ್ಮಂಗಳಂ = ಲೋಕಕ್ಕೆ ಕಲ್ಯಾಣಕರವಾದ (ಕ್ಷೇಮಕರವಾದ), ದೇವೇಶಸ್ಯ = ಶ್ರೀರಂಗನಾಥ ದೇವರ, ದಶಾವತಾರವಿಷಯಂ = ಮತ್ಸ್ಯಾವತಾರವೇ ಮೊದಲಾದ ಹತ್ತು ಅವತಾರಗಳ ವಿಷಯವಾದ, ಸ್ತೋತ್ರಂ=ಸ್ತುತಿಯನ್ನು, ಯಃ = ಯಾವನು, ವಿವಕ್ಷೇತ = ಹೇಳಲಪೇಕ್ಷಿಸುತ್ತಾನೆಯೋ, ತಸ್ಯ = ಅವನ, ವಕ್ತ್ರೇ = ಮುಖದಲ್ಲಿ (ವಾಕ್ಕಿನಲ್ಲಿ), ಸರಸ್ವತೀ = ವಾಗ್ದೇವತೆಯು, ಬಹುಮುಖೀ = ಅನೇಕಪ್ರಕಾರವುಳ್ಳದ್ದಾಗಿಯೂ, ಮಾನಸೇ = ಮನಸ್ಸಿನಲ್ಲಿ, ಪರಾ = ಶ್ರೇಷ್ಠವಾದ, ಭಕ್ತಿಃ = ಭಕ್ತಿಯೂ, ತನೌ = ಶರೀರದಲ್ಲಿ, ಕಾಪಿ = ಹೇಳುವುದಕ್ಕಾಗದ(ಅಪೂರ್ವವಾದ), ಶುದ್ಧಿಃ = ನಿರ್ಮಲತ್ವವೂ, ದಶಸು=ಹತ್ತು, ದಿಶಾಸು= ದಿಕ್ಕುಗಳಲ್ಲಿಯೂ, ಶುಭಾ = ಮಂಗಳಕರವಾದ (ಸಮಸ್ತ ಜನರಿಂದಲೂ ಕೊಂಡಾಡಲು ಯೋಗ್ಯವಾದ), ಕೀರ್ತಿಃ=ಯಶಸ್ಸೂ, ಜೃಂಭತೇ = ವೃದ್ಧಿಯಾಗುತ್ತದೆ.

ತಾ.—ವಿದ್ಯೆಗಳಿಗೆ ಸಾಗರದಂತಿರುವ ವೇಂಕಟೇಶ್ವರ ಕವಿಯಾದ ನನ್ನಲ್ಲಿ ಉಂಟಾದ, ಲೋಕಕ್ಕೆ ಮಂಗಳಕರವಾದ ಶ್ರೀ ರಂಗನಾಥದೇವರ ದಶಾವತಾರ ವಿಷಯವನ್ನು ಯಾವನು ಹೇಳಲು ಅಪೇಕ್ಷಿಸುತ್ತಾನೆಯೋ ಅವನ ವಾಕ್ಕಿನಲ್ಲಿ ವಾಗ್ದೇವತೆಯು ಗಂಗಾ ಪ್ರವಾಹದಂತೆ ಬಹುಮುಖವಾಗಿಯೂ ಮನಸ್ಸಿನಲ್ಲಿ ಅಧಿಕ ಭಕ್ತಿಯೂ, ಶರೀರದಲ್ಲಿ ಶುದ್ಧಿಯೂ, ಮತ್ತು ಹತ್ತು ದಿಕ್ಕುಗಳಲ್ಲಿಯೂ ಎಲ್ಲರಿಂದಲೂ ಕೊಂಡಾಡಲು ಯೋಗ್ಯವಾದ ಕೀರ್ತಿಯೂ, ವೃದ್ಧಿಯಾಗುತ್ತದೆ.

ದಶಾವತಾರ ಸ್ತೋತ್ರಂ ಸಂಪೂರ್ಣಂ.

---

ಕವಿತಾರ್ಕಿಕ ಸಿಂಹಾಯ ಕಲ್ಯಾಣ ಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತಗುರವೇ ನಮಃ ॥

ಅರ್ಥ.—ಕವಿತಾರ್ಕಿಕಸಿಂಹಾಯ= ಕವಿಗಳಲ್ಲಿಯೂ ಹೇತುವಾದ ಮಾಡುವವರಲ್ಲಿಯೂ ಶ್ರೇಷ್ಠರಾದ, ಕಲ್ಯಾಣಗುಣಶಾಲಿನೇ=ಸದ್ಗುಣಗಳಿಂದ ಭೂಷಿತರಾದ, ಶ್ರೀಮತೇ= ಜ್ಞಾನಸಂಪನ್ನರಾದ, ವೇಙ್ಕಟೇಶಾಯ= ವೇಙ್ಕಟನಾಥರೆಂಬ, ವೇದಾನ್ತಗುರುವೇ= ವೇದಾನ್ತಾಚಾರ್ಯರಿಗೆ, ನಮಃ=ನಮಸ್ಕಾರವು.

ತಾ.—ಕವಿಗಳಲ್ಲಿಯೂ ತಾರ್ಕಿಕರಲ್ಲಿಯೂ ಶ್ರೇಷ್ಠರಾಗಿಯೂ, ಕಲ್ಯಾಣಗುಣಗಳಿಂದ ಭೂಷಿತರಾಗಿಯೂ ಜ್ಞಾನಸಂಪನ್ನರಾಗಿಯೂ ಇರುವ ಶ್ರೀಮದ್ವೇದಾನ್ತಾಚಾರ್ಯರಿಗೆ ನಮಸ್ಕಾರವು.

ಶ್ರೀಮತೇನಿಗಮಾನ್ತ ಮಹಾದೇಶಿಕಾಯ ನಮಃ

ಲೋಕಾಸ್ಸಮಸ್ತಾ ಸ್ಸುಖಿನೋಭವಂತು.

---

ಶ್ರೀಃ

ಶ್ರೀಮನ್ನಿಗಮಾನ್ತ ಮಹಾವೇಶಿಕವಿರಚಿತಂ

# ವೈ ರಾ ಗ್ಯ ಪ ಂ ಚ ಕ ಂ

---

ಸಿಲಂ ಕಿಮನಲಂ ಭವೇದನಲಮೌದರಂ ಬಾಧಿತುಂ
ಪಯಃಪ್ರಸೃತಿಪೂರಕಂ ಕಿಮುನಧಾರಕಂ ಸಾರಸಮ್ ।
ಅಯತ್ನಮಲಮಲ್ಲಕಂ ಪಥಿಪಟಚ್ಚರಂ ಕಚ್ಚರಂ
ಭಜನ್ತಿ ವಿಬುಧಾ ಮುಧಾಹ್ಯಹಹ ಕುಕ್ಷಿತಃ ಕುಕ್ಷಿತಃ ॥೧॥

ಶರೀರಪತನಾವಧಿಪ್ರಭುನಿಷೇವಣಾಪಾದನಾ
ದಬಿಂಧನಧನಂ ಜಯಪ್ರಶಮದಂ ಧನಂ ದಂಧನಮ್ ।
ಧನಞ್ಜಯವಿವರ್ಧನಂ ಧನಮುದೂಢ ಗೋವರ್ಧನಂ
ಸುಸಾಧನಮಬಾಧನಂ ಸುಮನಸಾಂ ಸಮಾರಾಧನಮ್ ॥೨॥

ದುರೀಶ್ವರದ್ವಾರ ಬಹಿರ್ವಿತರ್ದ್ದಿಕಾ
ದುರಾಸಿಕಾಯೈ ರಚಿತೋಽಯಮಞ್ಜಲಿಃ ।
ತದಞ್ಜನಾಭಂ ನಿರಪಾಯಮಸ್ತಿ ಮೇ
ಧನಂಜಯಸ್ಯಂದನಭೂಷಣಂ ಧನಮ್ ॥೩॥

ಕ್ಷೋಣೀಕೋಣಶತಾಂಶಪಾಲನಕಲಾ ದುರ್ವಾರಗರ್ವಾನಲ
ಕ್ಷುಭ್ಯತ್ ಕ್ಷುದ್ರನರೇನ್ದ್ರ ಚಾಟುರಚನಾಧನ್ಯಾನ್ನಮನ್ಯಾಮಹೇ ।
ದೇವಂ ಸೇವಿತುಮೇವ ನಿಶ್ಚಿನುಮಹೇ ಯೋಽಸೌದಯಾಳುಃ ಪುರಾ
ಧಾನಾಮುಷ್ಟಿಮುಚೇ ಕುಚೇಲಮುನಯೇ ದತ್ತೇಽಸ್ಮ ವಿತ್ತೇಶತಾಂ ॥೪॥

ಜ್ವಲತು ಜಲಧಿಕ್ರೋಡಕ್ರೀಡತ್ಕೃಪೀಡಭವಪ್ರಭಾ
ಭವಪಟುತರ ಜ್ವಾಲಾಮಾಲಾಕುಲೋ ಜಠರಾನಲಃ ।
ತೃಣಮಪಿ ವಯಂ ಸಮುತ್ಫುಲ್ಲ ಮಲ್ಲಿ ಮತಲ್ಲಿಕಾ
ಪರಿಮಳಮುಚಾ ವಾಚಾ ಯಾಚಾಮಹೇ ನಮಹೀಶ್ವರಾನ್ ॥೫॥

ನಾಸ್ತಿ ಪಿತ್ರಾರ್ಜಿತಂ ಕಿಂಚಿನ್ನಮಯಾ ಕಿಂಚಿದಾರ್ಜಿತಮ್ ।
ಅಸ್ತಿ ಮೇ ಹಸ್ತಿಶೈಲಾಗ್ರೇ ವಸ್ತು ಪೈತಾಮಹಂ ಧನಮ್ ॥೬॥

ವೈರಾಗ್ಯಪಞ್ಚಕಂ ಸಮ್ಪೂರ್ಣಮ್.

—o—

## ಪೀಠಿಕೆ

ಈ ವೈರಾಗ್ಯಪಂಚಕವೆಂಬ ಸ್ತೋತ್ರವನ್ನೂ ಶ್ರೀ ವುದ್ವೇದಾನ್ತ ದೇಶಿಕರೇ ರಚಿಸಿದರು. ಒಂದಾನೊಂದು ಸಮಯದಲ್ಲಿ ವಿಜಯನಗರ ಸಂಸ್ಥಾನದಲ್ಲಿ ವಿದ್ಯಾರಣ್ಯರು ರಾಜಮಾನ್ಯರಾಗಿರುವಾಗ, ಉಂಛವೃತ್ತಿಯಿಂದ ಜೀವಿಸುತ್ತಿರುವ ಆಚಾರ್ಯರ ವೃತ್ತಾಂತವನ್ನು ಕೇಳಿ ನಿಮ್ಮ ವಿಷಯವನ್ನು ಅರಸನಿಗೆ ತಿಳಿಸಿ ನಿಮ್ಮನ್ನು ಧನಿಕರನ್ನಾಗಿ ಮಾಡುವೆನು. ಇನ್ನುಮೇಲೆ ನೀವು ಹೀಗೆ ಕಷ್ಟಪಡಬೇಕಾಗಿರುವುದಿಲ್ಲವೆಂದು ಒಂದು ಪತ್ರವನ್ನು ಬರದು ಕಳುಹಿಸಲು, ಅದಕ್ಕೆ ಆಚಾರ್ಯರು ವಿಷಯಗಳಲ್ಲಿ ವೈರಾಗ್ಯವನ್ನೂ ಭಗವಂತನಲ್ಲಿ ಅತ್ಯಾದರವನ್ನೂ ತೋರಿಸುವ "ವೈರಾಗ್ಯ ಪಞ್ಚಕ" ವೆಂಬ ಐದು ಶ್ಲೋಕಗಳನ್ನು ಆ ಪತ್ರಕ್ಕೆ ಉತ್ತರವಾಗಿ ಬರದು ಕಳುಹಿಸಲು ಅದನ್ನು ನೋಡಿ ವಿದ್ಯಾರಣ್ಯರು ವೇದಾನ್ತದೇಶಿಕರ ವೈರಾಗ್ಯಕ್ಕೆ ಆಶ್ಚರ್ಯಪಟ್ಟರು. ಆ ಸಂದರ್ಭದಲ್ಲಿ ಈ ಸ್ತೋತ್ರವು ಆಚಾರ್ಯರಿಂದ ವಿರಚಿತವಾಯಿತು.

### ಶ್ಲೋಕ ॥೧॥

ಅರ್ಥ.—ಸಿಲಂ=ಗದ್ದೆ ಅರಣ್ಯ ಮುಂತಾದ ಸ್ಥಳಗಳಲ್ಲಿ ಕೆಳಗೆ ಬಿದ್ದಿರುವ ಧಾನ್ಯವು, ಔದರಂ=ಹೊಟ್ಟೆಯಲ್ಲಿರುವ. ಅನಲಂ=ಜಠರಾಗ್ನಿಯನ್ನು (ಹಸಿವನ್ನು) ಬಾಧಿತುಂ= ಹೋಗಲಾಡಿಸುವುದಕ್ಕೆ, ಅನಲಂಕಿಂ= ಸಾಕಾಗುವುದಿಲ್ಲವೇನು, ಪ್ರಸೃತಿಪೂರಕಂ= ಬೆರಳುಗಳನ್ನು ಜೋಡಿಸಿದ ಒಂದು ಕೈಯಿಂದ ತುಂಬುವ, ಸಾರಸಂ= ತಟಾಕಸಂಬಂಧವಾದ, ಪಯಃ=ನೀರು, ಕಿಮು ನಧಾರಕಮ್= ದಾಹವನ್ನು ತೀರಿಸಿ ದಣಿಯುವಂತೆ ಮಾಡಲಾರದೋ, ಪಥಿ= ದಾರಿಯಲ್ಲಿ ಬಿದ್ದಿರುವ, ಕಚ್ಚರಂ=ಕೊಳೆಯಾದ, ಪಟಚ್ಚರಂ=ಹರಕು

ಬಟ್ಟೆಯು, ಅಯತ್ನಮಲಮುಲ್ಲಿಕಂ=ಸುಲಭವಾಗಿ ಲಭಿಸಿದ ಕೌಪೀನ ಬಟ್ಟೆಯಾಗಿ, ಕಿಂನಭವೇತ್=ಆಗಲಾರದೋ, ಬುಧಾಃ=ವಿದ್ವಾಂಸರು, ಮುಧಾ=ವ್ಯರ್ಥವಾಗಿ, ಕುಕ್ಷಿತಃ=ತಮ್ಮ ಹೊಟ್ಟೆಗೋಸ್ಕರ, ಕುಕ್ಷಿತಃ =ಅಲ್ಪರಾದ ಪ್ರಭುಗಳನ್ನು, ಭಜನ್ತಿ=ಆಶ್ರಯಿಸುತ್ತಾರೆ. ಅಹಹ= ಆಶ್ಚರ್ಯ.

ತಾತ್ಪರ್ಯ॥ ಗದ್ದೆ ಅರಣ್ಯ ಮುಂತಾದ ಸ್ಥಳಗಳಲ್ಲಿ ಉದಿರಿರುವ ಕಾಳು ಗಳನ್ನು ಆರಿಸಿಕೊಂಡರೆ ಹಸಿವು ಶಾನ್ತವಾಗುವುದು. ಕೊಳದಲ್ಲಿ ಒಂದು ಬೊಗಸೆ ನೀರನ್ನು ತೆಗೆದುಕೊಂಡರೆ ದಾಹ ಶಾನ್ತಿಯಾಗುವುದು. ದಾರಿಯಲ್ಲಿ ಬಿದ್ದಿರುವ ಹರಕುಬಟ್ಟೆಯು ಕೌಪೀನಕ್ಕೆ ಸಾಕಾಗುವುದು. ಹೀಗಿರಲು ವಿದ್ವಾಂಸರೂ ಕೂಡ ವ್ಯರ್ಥವಾಗಿ ತಮ್ಮ ಹೊಟ್ಟೆಗೋಸ್ಕರ ಕೃಪಣರಾದ ಪ್ರಭುಗಳನ್ನು ಆಶ್ರಯಿಸುವರು ಆಶ್ಚರ್ಯವು.

ಶ್ಲೋಕ ॥೨॥

ಅರ್ಥ.—ಅಬಿಂಧನ=ನೀರನ್ನೇ ಕಟ್ಟಿಗೆಯನ್ನಾಗಿ ಯುಳ್ಳ (ನೀರನ್ನೇ ಆಹಾರವನ್ನಾಗಿ ಯುಳ್ಳ) ಧನಂಜಯ=ಜಾಠರಾಗ್ನಿಗೆ, ಪ್ರಶಮದಂ =ಶಾನ್ತಿಯನ್ನುಂಟುಮಾಡುವ, ಧನಂ=ದ್ರವ್ಯವು, ಶರೀರಪತನಾವಧಿ =ದೇಹವು ನಾಶವಾಗುವವರೆಗೂ, ಪ್ರಭುನಿಷೇವಣಾಪಾದನಾತ್= ಅಲ್ಪ ಪ್ರಭುಗಳ ಸೇವೆಯನ್ನುಂಟುಮಾಡುವುದರಿಂದ, ದಂಧನಂ= ಅತ್ಯಲ್ಪ ಪ್ರಯೋಜನವುಳ್ಳ ಧನ, ಧನಞ್ಜಯವಿವರ್ಧನಂ= ಅರ್ಜುನ ನನ್ನು ಉನ್ನತಸ್ಥಿತಿಗೆ ತಂದದ್ದೂ, ಉದೂಢಗೋವರ್ಧನಂ=ಗೋವ ರ್ಧನಪರ್ವತವನ್ನು ಮೇಲಕ್ಕೆತ್ತಿ ಹಿಡಿದಿದ್ದೂ, ಸುಮನಸಾಂ=ದೇವತೆ ಗಳಿಗೆ (ಜ್ಞಾನಿಗಳಿಗೆ) ಸಮಾರಾಧನಂ= ತೃಪ್ತಿಯನ್ನುಂಟುಮಾಡು ವುದೂ, ಸುಸಾಧನಂ= ಮೋಕ್ಷಕ್ಕೆ ಸಾಧನವಾದದ್ದೂ, ಅಬಾಧನಂ=

ಆಶ್ರಯಿಸಿದವರಿಗೆ ಯಾವ ತೊಂದರೆಯೂ ಇಲ್ಲದಿರುವುದೂ ಯಾವುದೋ ಅದೇ, ಧನಂ= ಇಷ್ಟಾರ್ಥದ ಸರ್ವಸ್ವವಾದ ಧನವು.

ತಾ॥ ದೇಹವು ಇರುವವರಿವಿಗೂ ಸೇವಕಾವೃತ್ತಿಯನ್ನುಮಾಡಿ ಅನಿತ್ಯವಾದ ಈ ಶರೀರವನ್ನು ಪೋಷಿಸುವುದಕ್ಕಾಗಿ ಸಂಪಾದಿಸುವ ಈ ಹಣವು ತುಚ್ಛವಾದದ್ದು. ಅರ್ಜುನನನ್ನು ಉತ್ತಮಸ್ಥಿತಿಗೆ ತಂದ, ಗೋವರ್ಧನಪರ್ವತವನ್ನು ಮೇಲಕ್ಕೆತ್ತಿ ಹಿಡಿದು ಗೋವುಗಳನ್ನು ರಕ್ಷಿಸಿದ, ಜ್ಞಾನಿಗಳಿಗೆ ಆನಂದವನ್ನುಂಟುಮಾಡುವ ಮತ್ತು ಸಮಸ್ತ ಪುರುಷಾರ್ಥಕ್ಕೂ ಸಾಧಕವಾದ ಶ್ರೀ ಕೃಷ್ಣಪರಮಾತ್ಮ ಸ್ವರೂಪವಾದ ಧನವೇ ಉತ್ತಮವಾದ ಧನವು.

ಶ್ಲೋಕ ॥೩॥

ಅರ್ಥ.—ದುರೀಶ್ವರ= ದುಷ್ಟಪ್ರಭುಗಳ ದ್ವಾರಬಹಿರ್ವಿತರ್ದ್ದಿಕಾ= ಹೊರಬಾಗಿಲಿನ ಜಗುಲಿಯಮೇಲೆ, ದುರಾಸಿಕಾಯೈ= ಅನೇಕವಿಧ ಅವಮಾನಗಳನ್ನು ಸಹಿಸಿಕೊಂಡು ಕಾಯುವ ಸನ್ನಿವೇಶಕ್ಕೆ, ಅಯಂ = ಈ, ಅಞ್ಜಲಿಃ= ನಮಸ್ಕಾರವು, ರಚಿತಃ= ರಚಿಸಲ್ಪಟ್ಟಿತು. ಯತ್= ಯಾವ ಧನವು, ಅಞ್ಜನಾಭಂ= ಕಾಡಿಗೆಯಂತೆ ಕಪ್ಪು ಬಣ್ಣವುಳ್ಳದ್ದೋ, ನಿರಪಾಯಂ= ಅಪಾಯವಿಲ್ಲದ್ದೋ, ಧನಂಜಯ= ಅರ್ಜುನನ, ಸ್ಯನ್ದನ= ರಥಕ್ಕೆ, ಭೂಷಣಂ= ಆಭರಣದಂತಿರುವುದೋ ಅಪ್ರಸಿದ್ಧವಾದ ಶ್ರೀ ಕೃಷ್ಣರೂಪವಾದ, ಧನಂ =ಧನವು, ಮೇ= ನನಗೆ ಅಸ್ತಿ= ಇರುತ್ತದೆ.

ತಾ॥ ಅಧಿಕ ಸಂಪತ್ತಿನಿಂದ ತಾವೇ ಧನ್ಯರೆಂದು ಮದಿಸಿ ಇತರರನ್ನು ತುಚ್ಛವಾಗಿ ಕಾಣುವ ಪ್ರಭುಗಳ ಮನೆಯ ಹೊರಬಾಗಿಲಿನ ಜಗುಲಿಯ ಮೇಲೆ ಕಾದು ಅನೇಕ ವಿಧಗಳಿಂದ ತಿರಸ್ಕಾರವನ್ನು ಸಹಿಸಿ

ಕೊಂಡು ಸಂಪಾದಿಸುವ ಧನವನ್ನು ನಿಂದಿಸಬೇಕು. ನೀಲಮೇಘ ಶ್ಯಾಮನಾದ ಯಾವ ವಿಧವಾದ ಅಪಾಯವೂ ಇಲ್ಲದಿರುವ ಅರ್ಜುನನ ರಥಕ್ಕೆ ಅಲಂಕಾರರೂಪನಾದ ಶ್ರೀಕೃಷ್ಣರೂಪವಾದ ಧನವು ನನಗಿರುತ್ತದೆ.

ಶ್ಲೋಕ ॥೪॥

ಅರ್ಥ.—ಕ್ಷೋಣೀ=ಭೂಮಿಯ, ಕೋಣ=ಯಾವುದೋ ಒಂದು ಮೂಲೆಯ ಒಂದು ಭಾಗದ, ಶತಾಂಶ= ನೂರರಲ್ಲಿ ಒಂದು ಭಾಗವನ್ನು, ಪಾಲನಕಲಾ= ಕಾಪಾಡುವ ವಿದ್ಯೆಯಿಂದ ದುರ್ವಾರ= ತಡೆಯಲಶಕ್ಯವಾದ, ಗರ್ವಾನಲ= ಗರ್ವವೆಂಬ ಅಗ್ನಿಯಿಂದ, ಕ್ಷುಭ್ಯತ್= ಕ್ಷೋಭೆಯನ್ನು ಹೊಂದುತ್ತಿರುವ (ಇತಿಕರ್ತವ್ಯತಾಮೂಢರಾದ) ಕ್ಷುದ್ರನರೇಂದ್ರ= ಅಲ್ಪರಾದ ಪ್ರಭುಗಳನ್ನು (ಯಾಚಿಸುವುದಕ್ಕೋಸ್ಕರ) ಚಾಟುರಚನಾ= ಮಧುರವಾದ ಸ್ತೋತ್ರಗಳಿಂದ, ಧನ್ಯಾನ್=ತಾವು ಧನ್ಯರೆಂದು ಭಾವಿಸುವವರನ್ನು, ನಮನ್ಯಾಮಹೇ= ಗೌರವಿಸುವುದಿಲ್ಲ. ಯಃ = ಯಾವ, ದಯಾಳುಃ= ದಯಾಶಾಲಿಯಾದ, ಅಸೌ = ಈ ಪರಮಾತ್ಮನು ಪುರಾ=ಪೂರ್ವದಲ್ಲಿ, ದಾನಾಮುಷ್ಟಿಮುಚೇ=ಒಂದು ಹಿಡಿ ಅವಲಕ್ಕಿಯನ್ನು ಕೊಟ್ಟ, ಕುಚೇಲಮುನಯೇ = ಹರಕುಬಟ್ಟೆಯನ್ನು ಧರಿಸಿರುವ ಒಬ್ಬ ಬಡಬ್ರಾಹ್ಮಣನಾದ ಭಕ್ತನಿಗೆ, ವಿತ್ತೇಶತಾಂ =ಧನಾಧಿಪತ್ಯವನ್ನು, ದತ್ತೇಸ್ಮ= ಕೊಟ್ಟನೋ, ದೇವಮೇವ = ಆ ಪ್ರಭುವಾದ ಪರಮಾತ್ಮನನ್ನೇ, ಸೇವಿತುಂ= ಸೇವಿಸುವುದಕ್ಕೆ, ನಿಶ್ಚಿನುಮಹೇ= ನಿಶ್ಚಯಿಸಿರುತ್ತೇವೆ.

ತಾ॥ ಭೂಮಿಯ ಯಾವುದೋ ಒಂದು ಮೂಲೆಯ ಅತ್ಯಲ್ಪ ಭಾಗಕ್ಕೆ ಅಧಿಕಾರವನ್ನು ವಹಿಸಿರುವ ಮಾತ್ರದಿಂದ ಮತ್ತರಾದ

ಪ್ರಭುಗಳನ್ನು ಭಿಕ್ಷೆಗೋಸ್ಕರನಾಗಿ ದೀನರಾಗಿ ಅತಿಶಯೋಕ್ತಿಗಳಿಂದ ಸ್ತುತಿಸಿ, ತೃಪ್ತಿಪಡಿಸಿ ಅವರಿಂದ ಕೊಡಲ್ಪಟ್ಟ ಅಲ್ಪ ದ್ರವ್ಯದಿಂದ ಧನಿಕರೆಂದು ತಿಳಿದಿರುವವರನ್ನು ಗೌರವಸ್ಥರೆಂದು ನಾವು ಎಣಿಸು ದಿಲ್ಲ. ಕೇವಲ ಒಂದು ಹಿಡಿ ಅವಲಕ್ಕಿ ಮಾತ್ರದಿಂದ ಪ್ರೀತನಾಗಿ ಭಕ್ತನಾದ ಬಡಬ್ರಾಹ್ಮಣನಿಗೆ ಅಪರಿಮಿತನಾದ ಐಶ್ವರ್ಯವನ್ನು ದಯಪಾಲಿಸಿದ ಪ್ರಪಂಚಕ್ಕೆಲ್ಲಾ ಒಡೆಯನಾದ ಪರಮಾತ್ಮನೊಬ್ಬ ನನ್ನೇ ಸೇವಿಸಲು ನಿಶ್ಚಯಿಸಿರುತ್ತೇನೆ.

ಶ್ಲೋಕ ॥೫॥

ಅರ್ಥ.—ಜಲಧಿಕ್ರೋಢ = ಸಮುದ್ರ ಮಧ್ಯದಲ್ಲಿ, ಕ್ರಿಡತ್ = ಆಡುತ್ತಿರುವ (ಪ್ರಕಾಶಿಸುತ್ತಿರುವ) ಕೃಪೀಡಭವ = ಬಡಬಾಗ್ನಿಯು, ಪ್ರಭಾ = ಪ್ರಕಾಶಕ್ಕೆ, ಪ್ರತಿಭಟ = ಸಮಾನವಾದ, ಪಟು = ಸಮರ್ಥವಾದ, ಜ್ವಾಲಾಮಾಲಾ = ಅನೇಕ ಜ್ವಾಲೆಗಳಿಂದ, ಆಕುಲಃ = ವ್ಯಾಪ್ತನಾದ, ಜಠರಾನಲಃ = (ನಮ್ಮ ಹೊಟ್ಟೆಯಲ್ಲಿರುವ) ಜಠರಾಗ್ನಿಯು, ಜ್ವಲತು = ಉರಿಯಲಿ, ವಯಂ = ನಾವು, ಸಾಯಂ = ಸಾಯಂಕಾಲದಲ್ಲಿ, ಸಂಫುಲ್ಲ = ಅರಳಿದ, ಮಲ್ಲಿಮತಲ್ಲಿಕಾ = ಶ್ರೇಷ್ಠವಾದ ಮಲ್ಲಿಗೆ ಹೂವಿನ, ಪರಿಮಳಮುಚಾ = ಸುವಾಸನೆಯನ್ನು ಬೀಸುವ, ವಾಚಾ = ಮಾತಿನಿಂದ, ಮಹೇಶ್ವರಾನ್ = ಪ್ರಭುಗಳನ್ನು ತೃಣಮಪಿ = ಸ್ವಲ್ಪವೂ ಕೂಡ, ನಯಾಚಾಮಹೇ = ಯಾಚಿಸುವುದಿಲ್ಲ.

ತಾ॥ ಸಮುದ್ರದ ಮಧ್ಯದಲ್ಲಿರುವ ಬಡಬಾಗ್ನಿಯಂತೆ ಎಷ್ಟು ಆಹಾರ ಸಿಕ್ಕಿದರೂ ಸಾಲದೇ ಯಾವಾಗಲೂ ನಮ್ಮನ್ನು ಹಸಿವಿನಿಂದ ಪೀಡಿಸುತ್ತಿರುವ ನಮ್ಮ ಹೊಟ್ಟೆಯಲ್ಲಿರುವ ಜಠರಾಗ್ನಿಯು ಎಷ್ಟು

ಪೀಡಿಸಿದರೂ ಸರಿಯೇ, ನಮ್ಮ ಮಧುರನಾದ ಮಾತಿನಿಂದ ಕುತ್ಸಿತರಾದ ಅರಸರನ್ನು ಸ್ವಲ್ಪಮಟ್ಟಿಗೂ ನಾವು ಯಾಚಿಸುವುದಿಲ್ಲ.

ಶ್ಲೋಕ ॥೬॥

ನಿಮಗೆ ಪಿತ್ರಾರ್ಜಿತ ದ್ರವ್ಯವು ಅಧಿಕವಾಗಿರುವುದು. ಆದುದರಿಂದಲೇ ಇಷ್ಟು ವೈರಾಗ್ಯವಿರಬಹುದು ಅಂದರೇ.

ಅರ್ಥ.—ಮೇ = ನನಗೇ, ಪಿತ್ರ್ಯಾರ್ಜಿತಂ = ತಂದೆಯಿಂದ ಸಂಪಾದಿಸಲ್ಪಟ್ಟ ಧನವು, ಕಿಂಚಿತ್ = ಸ್ವಲ್ಪವೂ, ನಾಸ್ತಿ = ಇಲ್ಲ, ಮಯಾ = ನನ್ನಿಂದ, ಕಿಂಚಿತ್ = ಸ್ವಲ್ಪವೂ, ನಾರ್ಜಿತಂ = ಸಂಪಾದಿಸಲ್ಪಡಲಿಲ್ಲ, ಆದರೇ, ಹಸ್ತಿಶೈಲಾಗ್ರೇ = ಹಸ್ತಿಗಿರಿಯ ತುದಿಯಲ್ಲಿ, ಪೈತಾಮಹಂ = ತಾತನವರಿಂದ ಸಂಪಾದಿಸಲ್ಪಲ್ಟ (ಚತುರ್ಮುಖ ಬ್ರಹ್ಮನಿಂದ ಸಂಪಾದಿಸಲ್ಪಟ್ಟ.) ವಸ್ತು = ಶ್ರೀ ವರದರಾಜಸ್ವಾಮಿ ರೂಪವಾದ ಆಸ್ತಿಯು, ಮೇ = ನನಗೆ, ಅಸ್ತಿ = ಇರುತ್ತದೆ.

ತಾ॥ ನನಗೆ ಪಿತ್ರಾರ್ಜಿತ ದ್ರವ್ಯವೂ ಇಲ್ಲ ಸ್ವಾರ್ಜಿತ ದ್ರವ್ಯವೂ ಇಲ್ಲ. ಆದರೇ ಚತುರ್ಮುಖ ಬ್ರಹ್ಮನಿಂದ ಯಜ್ಞದಲ್ಲಿ ಸಾಕ್ಷಾತ್ಕರಿಸಿ ಸಂಪಾದಿಸಲ್ಪಟ್ಟ ಶ್ರೀ ವರದರಾಜಸ್ವಾಮಿರೂಪವಾದ ಆಸ್ತಿಯು ನನಗೆ ಶಾಶ್ವತವಾಗಿರುತ್ತದೆ.

ಟಿಪ್ಪಣಿ.—ಪ್ರಪಂಚದಲ್ಲಿ ತಂದೆಯ ಆಸ್ತಿಗಿಂತಲೂ ಪಿತಾಮಹನ ಆಸ್ತಿಯಲ್ಲಿ ಪೌತ್ರನಿಗೆ ಸ್ವಾತಂತ್ರ್ಯವು ಹೆಚ್ಚು. ಈ ವಿಷಯವು ಪಿತಾಮಹ ಶಬ್ದದಿಂದ ಸೂಚಿತವಾಗುತ್ತದೆ. ಮುಖ್ಯವಾಗಿ ಆಚಾರ್ಯರಿಗೆ ಪರಮಾತ್ಮನೊಬ್ಬನೇ ತಮ್ಮ ಆಸ್ತಿಯು ಸರ್ವಸ್ವವೆಂದು ಭಾವವು.

ವೈರಾಗ್ಯಪಞ್ಚಕಂ ಸಂಪೂರ್ಣಂ

ಶ್ರೀಮತೇನಿಗಮಾನ್ತಮಹಾದೇಶಿಕಾಯನಮಃ

---

## ಶುದ್ಧಾಶುದ್ಧ ಪತ್ರಿಕೆ

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 6 | 17 | ಗಡ್ಡೆಯಂತೆ | ಗಡ್ಡೆಯಂತಿರುವುದಾಗಿ |
| 8 | 17 | ಶ್ರೀ ನೃಸಿಂಹ ಮೂರ್ತಿಯು ದಿವ್ಯ ನಖಗಳು | ದಿವ್ಯನಖಗಳುಳ್ಳ ಶ್ರೀ ನೃಸಿಂಹಮೂರ್ತಿಯು |
| 12 | 4 | ವಾದುದರಿಂದಲೇ | ವಾದ |
| 14 | 22 | ಚಂಕ್ರಮಧುರಾಂ | ಚಂಕ್ರಮಧುರಾ |
| 17 | 5 | ಕಲ್ಕಿವಾಹನ | ಕಲ್ಕವಾಹನ |
| 18 | 3 | ,, | ,, |
| 22 | 2 | ತೃಣಮುಪಿವಯಂ | ತೃಣಮುಪಿವಯಂ ಸಾಯಂ |
| 28 | 6 | ನನಗೇ | ನನಗೆ. |

## ನಮ್ಮಲ್ಲಿ ದೊರೆಯುವ ಪುಸ್ತಕಗಳು

---

1. ಶ್ರೀ ಹಯಗ್ರೀವ ಸ್ತೋತ್ರ
   (ಕನ್ನಡ ಟೀಕಾತಾತ್ಪರ್ಯ ಸಹಿತ)
2. ದಶಾವತಾರ ಸ್ತೋತ್ರ ಮತ್ತು ವೈರಾಗ್ಯ ಪಂಚಕ
   (ಕನ್ನಡ ಟೀಕಾತಾತ್ಪರ್ಯ ಸಹಿತ)

*Address* :—

**A. VENKATACHAR,**

SANSKRIT PANDIT,

**Marimallappa's High Scho**

**MYSORE**